RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಆಗಸ್ಟ್ ೧೫, ೨೦೧೩ (ಶ್ರಾವಣ ೨೪, ಶಕ ವರ್ಷ ೧೯೩೫)<br>Bangalore, Thursday, August 15, 2013 (Shravana 24, Shaka Varsha 1935) | ಸಂಚಿಕೆ ೩೩<br>Issue 33 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**5ನೇ ಎ.ಸಿ.ಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ, ಬೆಂಗಳೂರು ನಗರ.**

**ವಿಷಯ :–** ವಾರಸುದಾರರಿಲ್ಲದ ದ್ವಿ ಚಕ್ರವಾಹನಗಳ ಮಾಲೀಕರುಗಳ ಪತ್ತೆಗಾಗಿ

**ದ್ವಿ ಚಕ್ರ ವಾಹನಗಳ ವಿವರ.**

| ಕ್ರ. ಸಂ | ಅಮಾನತ್ತು ದಿನಾಂಕ | ಪಿಮಿಸ್ ನಂ. | ಸ್ವತ್ತಿನಪಟ್ಟಿ ಸಂಖ್ಯೆ | ಮಾಲಿನ ವಿವರ |
|---|---|---|---|---|
| 1 | 19/01/13 | 62/2013 | 07/2013 | ಸುಜುಕಿ ಫಿಯರೋ ಎಫ್2, ನಂ.ಕೆಎ–02 ಇಎಲ್–864 ಇಂಜಿನ್ ನಂ. 0EIL32030404 ಚಾಸಿಸ್ ನಂ.MD624CE1832LI6621 |
| 2 | 23/01/2013 | 77/2013 | 09/2013 | ಬಜಾಜ್ ಸಿಟಿ–100, ನಂ.ಕೆಎ–04 ಯು–1340 ಇಂಜಿನ್ ನಂಬರ್ DUMBCG60771 ಚಾಸಿಸ್ ನಂಬರ್ DUFBEG73774 |
| 3 | 23/01/2013 | 78/2013 | 10/2013 | ಹೀರೋ ಹೋಂಡಾ, ನಂ.ಕೆಎ–40 ಎಲ್–4940 ಇಂಜಿನ್ ನಂಬರ್ 00A17E03944 ಚಾಸಿಸ್ ನಂಬರ್ 00A19F03091 |
| 4 | 23/01/2013 | 79/2013 | 11/2013 | ಆರ್.ಎಕ್ಸ್–100, ನಂ.ಟಿಎಎಸ್–3800 ಇಂಜಿನ್ ನಂಬ಼ 1LI046654 ಚಾಸಿಸ್ ನಂಬರ್ 1LI046654 |
| 5 | 23/01/2013 | 80/2013 | 12/2013 | ಹೀರೋ ಹೋಂಡಾ ಸ್ಪ್ಲೆಂಡರ್, ಕೆಎ–05 ಎಂ–5092 ಇಂಜಿನ್ ನಂಬರ್ S797CM3GBG ಚಾಸಿಸ್ನಂಬರ್ 931110F02830 |
| 6 | 24/01/2013 | 86/2013 | 14/2013 | ಬಜಾಜ್ ಪಲ್ಸರ್, ನಂ.ಕೆಎ–02 ಹೆಚ್ಎ–9229 ಇಂಜಿನ್ನಂಬರ್DHGBPG99669ಚಾಸಿಸ್ನಂಬರ್ MD2DHDHZZPCG60025 |
| 7 | 25/01/2013 | 87/2013 | 15/2013 | ಹೀರೋ ಹೋಂಡಾ ಸ್ಪ್ಲೆಂಡರ್, ಕೆಎ–02 ಇಇ–8396 ಇಂಜಿನ್ ನಂಬರ್ 06E15E22696 ಚಾಸಿಸ್ ನಂಬರ್ ಇರುವುದಿಲ್ಲ |
| 8 | 27/01/2013 | 95/2013 | 16/2013 | ಯಮಹಾ, ನಂ.ಕೆಎ–02 ಇಬಿ–622 ಇಂಜಿನ್ ನಂಬರ್ 1LSB15842 ಚಾಸಿಸ್ ನಂಬರ್ 00CIL5-315842 |
| 9 | 28/01/2013 | 100/2013 | 17/2013 ಐಟಂ.ನಂ1 | ಬಜಾಜ್ ಪಲ್ಸರ್ ನಂಬರ್ ಇರುವುದಿಲ್ಲ ಇಂಜಿನ್ ನಂಬರ್ DHGBLF59852 ಚಾಸಿಸ್ ನಂಬರ್ DHVBLF61093 |
| 10 | 28/01/2013 | 100/2013 | 17/2013 ಐಟಂನಂ.2 | ಕವಾಸಕಿ ಬಜಾಜ್ ಬಾಕ್ಸರ್, ಕೆಎ–02 ಇಎಲ್–5937 ಇಂಜಿನ್ ನಂಬರ್ DFFBJD68242 ಚಾಸಿಸ್ ನಂಬರ್ DMMBJD06874 |
| 11 | 02/02/2013 | 126/2013 | 22/2013 | ಕೆನಟಿಕ್ ಹೋಂಡಾ,ಕೆಎ–02 ಹೆಚ್ 6751 ಇಂಜಿನ್ ನಂಬರ್ 769002NIEFD ಚಾಸಿಸ್ ನಂಬರ್ ಇರುವುದಿಲ್ಲ. |

**5ನೇ ಎ.ಸಿ.ಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರು,**
**ಬೆಂಗಳೂರು ನಗರ.**

**PR.1970**

**K.L. PODDAR & SONS PRIVATE LIMITED**

**(Under Members Voluntary Winding Up)**

**Regd Off : #49 3rd Floor, West Wing, Khanija Bhavan, Race Course Road, Bangalore-560 001.**

**PUBLIC NOTICE**

Notice is hereby given for general information of the public that the members of K.L. Poddar & Sons Pvt. Ltd at its Extra-Ordinary General Meeting held at the registered office at Khanija Bhavan, 3rd Floor, West Wing, # 49 Race Course Road, Banglaore-560 001, Karnataka, on Thursday, the 18th day of July, 2013 at 10.00 A.M. have passed the following special resolutions to wind up the Company Voluntarily as Members Voluntary Winding up in accordance with the relevant provisions of the Companies Act, 1956 :

**1. MEMBERS VOLUNTARY WINDING UP :**

"RESOLVED THAT having regard to the declaration made by the Board of Directors in their meeting held on 25-06-2013 and delivered to the Registrar of Companies under Section 488 of the Companies Act, 1956, stating that the Company does not have any debts, the consent of the members of the Company be and is hereby accorded to wind up the affairs of the Company voluntarily pursuant to the provisions of Section 484(1)(b) of the Companies Act, 1956".

RESOLVED FURTHER THAT any one of the Directors of the company, be and is hereby authorised to give notice of this resolution by advertisement in the Official Gazette and also in two newspapers, one in English and one in vernacular language circulating in the district in which the registered office of the Company situates and to file the requisite form with the Registrar of Companies, Karnataka."

**2. APPOINTMENT OF LIQUIDATOR :**

"RESOLVED THAT Pursuant to the provisions of Section 490 of the Companies Act, 1956, Mr. H.R. Jain, be and is hereby appointed as Liquidator of the Company for the purpose of voluntary winding up of the affairs of the Company.

RESOLVED FURTHER THAT the consent of the members of the Company be and is hereby accorded to sanction the remuneration of liquidator of Rs. 20,000/- (Rupees twenty thousand only).

RESOLVED FURTHER THAT Mr. H.R. Jain, Liquidator be and is hereby authorised to exercise all the powers as per the provisions of Companies Act, 1956 to effectively wind up the affairs of the Company.

RESOLVED FURTHER THAT Mr. Basant Poddar, Director of the Company be and is hereby authorised to file notice of appointment of Mr. H.R. Jain as the Liquidator with the Registrar of Companies, Karnataka and to do all such acts, deeds, things and such other matters which are necessary and incidental to the winding up of the Company."

By Order of the Board of Directors of
K.L. PODDAR & SONS PRIVATE LIMITED
**Director**

**P.D. 94**
**SC - 10**

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**
**ಕಾರ್ಯ ನಿರ್ವಾಹಕ ಇಂಜಿನೀಯರರು (ವಿ), ಬೃಹತ್ ಕಾಮಗಾರಿ ವಿಭಾಗ ಕಛೇರಿ, ನಂದವಾಡಗಿ ಬಿಲ್ಡಿಂಗ್, ರೂಪ ಲ್ಯಾಂಡ್, ವಿದ್ಯಾಗಿರಿ, ಬಾಗಲಕೋಟ-587102**

**ಪ್ರಕಟಣೆ**

**ಸಂಖ್ಯೆ : 614/ಬಾಕೋ/ಕಾನಿಇಂ (ವಿ)/ಬೃಕಾವಿ/ಸಕಾನಿಇಂ(ಕ)/13-14/1027-28, ದಿನಾಂಕ : 12-07-2013.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003ರ ಕಲಂ 67ರ ಅಡಿಯಲ್ಲಿ ಯೋಜನೆಯನ್ನು ರೂಪಿಸಿದೆ ಮತ್ತು ಇದೆ ಕಾಯ್ದೆ 67(2) (ಸಿ)ಯ ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**ಯೋಜನೆಯ ಹೆಸರು :** ಬಿಸನಾಳ ಗ್ರಾಮದಲ್ಲಿ 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಿಸುವದು ಹಾಗೂ ಪ್ರಸ್ತುತ ಬೀಳಗಿ-ಗಿರಿಸಾಗರ 110 ಕೆ.ವ್ಹಿ. ಒಂಟಿ ಮಾರ್ಗದಿಂದ ಜೋಡಿಗೋಪುರದ ಮೇಲೆ ಒಂಟಿ ಮಾರ್ಗವನ್ನು ನಿರ್ಮಿಸಿ ಪ್ರಸ್ತಾವಿತ 110 ಕೆ.ವ್ಹಿ. ಬಿಸನಾಳ ವಿದ್ಯುತ್ ಕೇಂದ್ರಕ್ಕೆ ಜೋಡಿಸುವದು. (ಮಾರ್ಗದ ಉದ್ದ 15,839 ಕಿ.ಮೀ)

**ಪ್ರಮುಖ ಲಕ್ಷಣಗಳು :** ಬೀಳಗಿ ತಾಲ್ಲೂಕಿನ ಬಿಸನಾಳ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು ಬೀಳಗಿ, ನಾಗರಾಳ, ಸಿದ್ದಾಪುರ, ತೆಗ್ಗಿ, ಬಿಸನಾಳ ಗ್ರಾಮಗಳ ಸರಹದ್ದಿನಲ್ಲಿ ಹಾಯ್ದು ಹೋಗುವುದು.

**ಯೋಜನೆಯ ಅಂದಾಜು ವೆಚ್ಚ :** ರೂ. 696.00 ಲಕ್ಷ ರೂಪಾಯಿಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ-3 (ಕೇಂದ್ರೀಯ ಕಾಯ್ದೆ 1885ರ 13 ರನ್ವಯ) ಅಧಿನಿಯಮ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲ ಅಧಿಕಾರವನ್ನು ನಿಗಮವು ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಸದರಿ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಈ ಪ್ರಕಟಣೆ ಪ್ರಕಟವಾದ 30 ದಿನಗಳೊಳಗಾಗಿ ಕಾರ್ಯ ನಿರ್ವಾಹಕ ಇಂಜನೀಯರ (ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ. ಬಾಗಲಕೋಟ ಇವರ ಕಛೇರಿಗೆ ಲಿಖಿತ ರೂಪದಲ್ಲಿ ಸಲ್ಲಿಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

**ಕಾರ್ಯ ನಿರ್ವಾಹಕ ಇಂಜಿನೀಯರು (ವಿ)**
ಬೃಹತ್ ಕಾಮಗಾರಿ ವಿಭಾಗ ಕವಿಪ್ರನಿನಿ, ಬಾಗಲಕೋಟ

**P.D. 95**
**SC - 10**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಬಸಮ್ಮಾ ಧರ್ಮರಾವರವರು ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಬಸವಕಲ್ಯಾಣ ತಾಲ್ಲೂಕು ಪಂಚಾಯತಿ, 25–ಯರಬಾಗ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ 1) ಜಿಲ್ಲಾಧಿಕಾರಿಗಳು, **ಬೀದರ್** ಜಿಲ್ಲೆ ರವರ ಪತ್ರದ ಸಂಖ್ಯೆ: **ಚುನಾ/ಸಿಆರ್/82/11-12** ದಿನಾಂಕ: **28–07–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/241/ಟಿಜಡ್‌ಪಿ/2011, ದಿನಾಂಕ: **24–08–2011**

3) ಜಿಲ್ಲಾಧಿಕಾರಿಗಳು, **ಬೀದರ್** ಜಿಲ್ಲೆ, ರವರ ಪತ್ರ ಸಂಖ್ಯೆ: **ಚುನಾ/ಸಿಆರ್/52/11-12** ದಿನಾಂಕ: **26–03–2012**

**ಪ್ರಸ್ತಾವನೆ:**

**ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **25–ಯರಬಾಗ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಬಸಮ್ಮಾ ಧರ್ಮರಾವರವರು** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಬೀದರ್** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **24–08–2011**ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **15–09–2011**ರಂದು **ಬಸಮ್ಮಾ ಧರ್ಮರಾವರವರಿಗೆ ಗ್ರಾಮಲೆಕ್ಕಿಗರುಜಾರಿ ಮಾಡಿದ್ದು,**ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಬಸಮ್ಮಾ ಧರ್ಮರಾವರವರು** ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/241(47)/ಟಿಜಡ್‌ಪಿ/2011,ಬೆಂಗಳೂರು ದಿನಾಂಕ: 19–11–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **25–ಯರಬಾಗತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ**ಬಸಮ್ಮಾ ಧರ್ಮರಾವ**ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಬಸಮ್ಮಾ ಧರ್ಮರಾವರವರನ್ನು** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

PR.1447 **ಆಯುಕ್ತರು,**

SC.10 **ರಾಜ್ಯ ಚುನಾವಣಾ ಆಯೋಗ.**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**AÊ§ A¿Êñ¹ ÔöP¹Ôô àNV141/1997-98 º¼ñNP 22/10/1997.**

**àNVH1.H¿ýKá.141/1997-97 º¼ñNP 11-07-2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ಫಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**BÊöóÀ** : ಶ್ರೀರಾಮಪ್ಪ ಬಿನ್ ದಿ॥ನಾರಾಯಣಪ್ಪ, ಹಂಪಸಂದ್ರ ಗ್ರಾಮ, ಗುಡಿಬಂಡೆ ತಾಲ್ಲೂಕು, ಕೋಲಾರ. (ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ).

**¿ÍPÊ§ ÔôôVñ¦NÙYçô0**

1. ದಿನಾಂಕ:22–10–1997ರಂದು ಬೆಳಗಿನ ಜಾವ 5.00 ಗಂಟೆಯ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಹಾಗೂ ಕಲ್‌ಕೆರೆ ಅರಣ್ಯ ಸಂಶೋಧನಾ ವಲಯದ ಸಿಬ್ಬಂದಿಗಳು ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ರಸ್ತೆಯಲ್ಲಿರುವ ಕಲ್‌ಕೆರೆ ಅರಣ್ಯ ಸಸ್ಯಕ್ಷೇತ್ರದಲ್ಲಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ಸದರಿ ಪ್ರದೇಶದಲ್ಲಿ ಗರಗಸದಿಂದ ಮರಕೊಯ್ಯುವ ಶಬ್ದವನ್ನು ಆಧರಿಸಿ ಸಿಬ್ಬಂದಿಗಳು ಮರ ಕೊಯ್ಯುವ ಶಬ್ಧದ ಕಡೆಗೆ ಸುತ್ತುವರೆದು ನೋಡಲಾಗಿ, ನಾಲ್ಕು ಜನ ಆಸಾಮಿಗಳು ಮರದ ತುಂಡುಗಳನ್ನು ಎತ್ತುತ್ತಿರುವುದು ಕಂಡುಬಂದಿರುತ್ತದೆ. ಕೂಡಲೇ ಸಿಬ್ಬಂದಿಗಳು ಆರೋಪಿಗಳನ್ನು ಹಿಡಿಯಲು ಪ್ರಯತ್ನಿಸಿದಾಗ, ಮೂರು ಜನ ಆರೋಪಿಗಳು ಅರಣ್ಯದೊಳಗೆ ಓಡಿ ಹೋಗಿದ್ದು, ಒಬ್ಬ ಆರೋಪಿ ಸಿಕ್ಕಿಬಿದ್ದಿರುತ್ತಾನೆ. ತಪ್ಪಿಸಿಕೊಂಡ ಆರೋಪಿಗಳು ಅರಣ್ಯದ ಒಳಗೆ ಓಡಿಹೋದ ಕಾರಣ, ಅವರನ್ನು ಹಿಡಿಯಲು ಸಾಧ್ಯವಾಗಿರುವುದಿಲ್ಲ. ವಶಕ್ಕೆ ತೆಗೆದುಕೊಳ್ಳಲಾದ ಆರೋಪಿಯನ್ನು ವಿಚಾರಿಸಲಾಗಿ, ಕೋಲಾರ ಜಿಲ್ಲೆ, ಗುಡಿಬಂಡೆ ತಾಲ್ಲೂಕಿನ ಹಂಪಸಂದ್ರ ಗ್ರಾಮದ ಲೇ॥ನಾರಾಯಣಪ್ಪನವರ ಮಗ 53 ವರ್ಷ ವಯಸ್ಸುಳ್ಳ ಶ್ರೀರಾಮಪ್ಪ ಎಂದು ತಿಳಿಸಿರುತ್ತಾನೆ. ಓಡಿ ಹೋದ ಆರೋಪಿಗಳ ಬಗ್ಗೆ ವಿಚಾರಿಸಲಾಗಿ, 1) ಅಶೋಕ ಬಿನ್ ನಡುಪನ್ನ, ಬೆಣ್ಣೆಪರ್ತಿ ಗ್ರಾಮ, ಗುಡಿಬಂಡೆ ತಾ॥, 2) ವೆಂಕಟರಮಣಪ್ಪ ಬಿನ್ ನಡುಪನ್ನ, ಬೆಣ್ಣೆಪರ್ತಿ ಗ್ರಾಮ, ಗುಡಿಬಂಡೆ ತಾ॥ ಹಾಗೂ 3) ಚಿಕ್ಕವೆಂಕಟಪ್ಪ ಬಿನ್ ನಡುಪನ್ನ, ಬೆಣ್ಣೆಪರ್ತಿ ಗ್ರಾಮ, ಗುಡಿಬಂಡೆ ತಾ॥ ಎಂದು ತಿಳಿಸಿರುತ್ತಾನೆ. ಆರೋಪಿಗಳು ಕಡಿತಲೆ ಮಾಡಿದ್ದ ಮರದ ತುಂಡುಗಳನ್ನು ಪರಿಶೀಲಿಸಲಾಗಿ, ಒಟ್ಟು 08 ಶ್ರೀಗಂಧದ ಹಸಿ ಮರದ ತುಂಡುಗಳಿದ್ದು, ಸದರಿ ಸ್ಥಳದಲ್ಲಿ ಮೂರು ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿರುವುದು ಖಾತರಿಯಾಗಿರುತ್ತದೆ. ಕಡಿತಲೆ ಮಾಡಿದ್ದ ಶ್ರೀಗಂಧದ ಹಸಿ ಮರದ ತುಂಡುಗಳನ್ನು ತೂಕ ಮಾಡಿ ನೋಡಲಾಗಿ, ಒಟ್ಟು ತೂಕ 120 ಕೆ.ಜಿ ಇರುತ್ತದೆ. ವಶಕ್ಕೆ ತೆಗೆದುಕೊಳ್ಳಲಾದ ಆರೋಪಿಯು ಶ್ರೀಗಂಧದ ಮರಗಳನ್ನು ಅಕ್ರಮವಾಗಿ ಕಡಿತಲೆ ಮಾಡಿ ಬೆಂಗಳೂರಿನಲ್ಲಿ ಮಾರಾಟ ಮಾಡುವ ಬಗ್ಗೆ ಹೇಳಿಕೆ ನೀಡಿರುತ್ತಾನೆ.

2. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969 ಉಲ್ಲಘಿಸಿರುವ ಕಾರಣ, ರಾಮಪ್ಪ ಬಿನ್ ಲೇ॥ನಾರಾಯಣಪ್ಪ ಈತನನ್ನು ಬಂಧಿಸಿ ಒಟ್ಟು 120 ಕೆ.ಜಿ ತೂಕವುಳ್ಳ ಶ್ರೀಗಂಧದ ಮರದ 08 ಹಸಿ ತುಂಡುಗಳನ್ನು ಪಂಚನಾಮೆ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ.

3. ಬಂಧಿಸಲಾದ ಆರೋಪಿಯನ್ನು ಮಾನ್ಯ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಆನೇಕಲ್, ಬೆಂಗಳೂರು ಜಿಲ್ಲೆ ರವರ ಸಮಕ್ಷಮ ಹಾಜರುಪಡಿಸಿ, ನಂತರ ನ್ಯಾಯಾಲಯದ ಆದೇಶದಂತೆ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ತನಿಖೆಗಾಗಿ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

4. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84, 86, 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ ಒಟ್ಟು 120 ಕೆ.ಜಿ ಶ್ರೀಗಂಧದ ಮರದ 08 ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

5. ಪ್ರಕರಣಕ್ಕೆ ಸಂಬಂಧಿಸಿದಂತೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಲಾಗಿ, ಆರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. ಈ ಸಂಬಂಧ ದಿನಾಂಕ:09–01–2013 ಹಾಗೂ 29–05–2013ರಂದು 71ಎ ನಡವಳಿಯನ್ನು ನಡೆಸಲಾಗಿ, ಆರೋಪಿ ವಿಚಾರಣೆಗೆ ಗೈರು ಹಾಜರಾದ ಕಾರಣ, ಹಾಜರಿದ್ದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ವಿ.ಶ್ರೀನಿವಾಸಪ್ಪ, ನಿವೃತ್ತ ವಲಯ ಅರಣ್ಯಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ), ಶ್ರೀ.ಕೆ.ಯು.ಪೋತಪ್ಪ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ಬಿ.ಡಿ.ರಮೇಶ್, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ ಇವರುಗಳ ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರ ಸಮಕ್ಷಮ ಪಡಯಲಾಗಿರುತ್ತದೆ. ಆರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಪಾಟಿ ಸವಾಲು ಇರುವುದಿಲ್ಲವೆಂದು ಪರಿಗಣಿಸಲಾಯಿತು.

6. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಅಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ಒಟ್ಟು 120 ಕೆ.ಜಿ ಶ್ರೀಗಂಧದ ಮರದ 08 ಹಸಿ ತುಂಡುಗಳನ್ನು ಸಾಗಣೆ ಮಾಡಲು ಯತ್ನಿಸಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಉಳಿದ ಸಾಕ್ಷಿಗಳ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದವನ್ನು ಮಂಡಿಸಿರುತ್ತಾರೆ.

7. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

7(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳನ್ನು ಅಕ್ರಮವಾಗಿ ಕಡಿದು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84, 86, 87 ರ ಉಲ್ಲಂಘನೆಯಾಗಿದೆಯೇ?

7(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

7(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

7(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

8. ದಿನಾಂಕ:22–10–1997ರಂದು ಬೆಳಗಿನ ಜಾವ 5.00 ಗಂಟೆಯ ಸಮಯದಲ್ಲಿ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ರಸ್ತೆಯಲ್ಲಿರುವ ಕಲ್‌ಕೆರೆ ಅರಣ್ಯ ಸಸ್ಯಕ್ಷೇತ್ರದಲ್ಲಿ ಅಕ್ರಮವಾಗಿ ಮೂರು ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಕಡಿತಲೆ ಮಾಡಿ ಸಾಗಣೆ ಮಾಡಲು ಯತ್ನಿಸಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಯ ಹೇಳಿಕೆ ಪ್ರಕಾರ ಶ್ರೀಗಂಧದ ಮರಗಳನ್ನು ಅಕ್ರಮವಾಗಿ ಕಡಿತಲೆ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

9. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ ಒಟ್ಟು 120 ಕೆ.ಜಿ ಶ್ರೀಗಂಧದ ಮರದ ತುಂಡುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:141/1997–98ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 120 ಕೆ.ಜಿ ತೂಕವುಳ್ಳ ಶ್ರೀಗಂಧದ ಮರದ ಎಂಟು (08) ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 11–07–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

PR.2005
SC.10

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ:43/1998-99 ದಿನಾಂಕ: 05/07/1998.**

**àNVÌ0H1.AA¿Ì.71A.43/98-99 º¼ÄNP0 29.05.2013.**

E¿á¬Êô 0 ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ÀNÏïñÌ º : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

BÊöóÀYçô : ಎ1–ಅಜ್ಮಲ್ ಬಿನ್ ಎಸ್.ಕೆ.ಬಾಷಾ, ಗ್ರೀಂಪೇಟ್, ಚಿತ್ತೂರು, ಆಂದ್ರಪ್ರದೇಶ ಹಾಗೂ

ಎ2–ಬಷೀರ್ ಬಿನ್ ಎಸ್.ಅನ್ವರ್ ಬಾಷಾ, ಗ್ರೀಂಪೇಟ್, ಚಿತ್ತೂರು, ಆಂದ್ರಪ್ರದೇಶ (ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ).

**¿ÌPÊ§ದ ÔôôVñÑÙYçô0**

1. ದಿನಾಂಕ:05–07–1998ರಂದು ಬೆಳಿಗ್ಗೆ 11.00 ಗಂಟೆಯ ಸಮಯದಲ್ಲಿ ಬೆಂಗಳೂರು ಅರಣ್ಯ ಸಂಚಾರಿ ದಳ ಸಿಬ್ಬಂದಿಗಳು ಇಲಾಖಾ ವಾಹನದಲ್ಲಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ಹೊಸಕೋಟೆ ಸಂತೆ ಮೈದಾನದ ಬಳಿ ಮಾಲೂರಿಗೆ ಹೋಗುವ ರಸ್ತೆಯಲ್ಲಿ ಇಬ್ಬರು ಆಸಾಮಿಗಳು ಕೈಯಲ್ಲಿ ಬ್ಯಾಗುಗಳನ್ನು ಹಿಡಿದುಕೊಂಡು ಅನುಮಾನಸ್ಪದವಾಗಿ ಬರುತ್ತಿದ್ದದನ್ನು ಕಂಡು ಅವರನ್ನು ತಡೆದು ನಿಲ್ಲಿಸಿ ಅವರ ಬಳಿ ಇದ್ದ ಬ್ಯಾಗುಗಳನ್ನು ಪರಿಶೀಲಿಸಿದಾಗ ಮರದ ಸಣ್ಣ ತುಂಡುಗಳಿದ್ದು, ಅದರ ಸುವಾಸನೆ ಹಾಗೂ ಭೌತಿಕ ಲಕ್ಷಣದಿಂದ ಶ್ರೀಗಂಧದ ತುಂಡುಗಳೆಂದು ಖಾತರಿಪಡಿಸಿಕೊಳ್ಳಲಾಯಿತು. ಈ ಬಗ್ಗೆ ಆಸಾಮಿಗಳನ್ನು ವಿಚಾರಿಸಲಾಗಿ ಒಬ್ಬ ಆಸಾಮಿ ಅಜ್ಮಲ್ ಬಿನ್ ಎಸ್.ಕೆ.ಬಾಷಾ, ವಯಸ್ಸು 25 ವರ್ಷ, ಗ್ರೀಂಪೇಟ್ ವಾಸಿ, ಚಿತ್ತೂರು, ಆಂದ್ರಪ್ರದೇಶ ಎಂದು ಹಾಗೂ ಎರಡನೇ ಆಸಾಮಿ ಬಷೀರ್ ಬಿನ್ ಎಸ್.ಅನ್ವರ್ ಪಾಷಾ, ವಯಸ್ಸು 28 ವರ್ಷ, ಗ್ರೀಂಪೇಟ್ ವಾಸಿ, ಚಿತ್ತೂರು, ಆಂದ್ರಪ್ರದೇಶ ಎಂದು ತಿಳಿಸಿರುತ್ತಾರೆ. ನಂತರ ಆಸಾಮಿಗಳು ಹೊಂದಿದ್ದ ಶ್ರೀಗಂಧವನ್ನು ತೂಕ ಮಾಡಲಾಗಿ 23 ಸಣ್ಣ ತುಂಡುಗಳಿದ್ದು, 13.5 ಕೆ.ಜಿ ಇರುತ್ತದೆ. ಶ್ರೀಗಂಧವನ್ನು ಸಾಗಣೆ ಮಾಡಲು ದಾಖಲಾತಿಗಳ ಬಗ್ಗೆ ವಿಚಾರಿಸಲಾಗಿ, ಆಸಾಮಿಗಳ ಬಳಿ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿರುತ್ತಾರೆ. ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ

1963 ಹಾಗೂ ಅರಣ್ಯ ಅರಣ್ಯ ನಿಯಮಾವಳಿ 1969 ಉಲ್ಲಂಘನೆಯಾಗಿರುವ ಕಾರಣ, ಸದರಿ ಇಬ್ಬರು ಆರೋಪಿಗಳನ್ನು ದಸ್ತಗಿರಿ ಮಾಡಿ ಒಟ್ಟು 13.5 ಕೆ.ಜಿ ಶ್ರೀಗಂಧದ 23 ಸಣ್ಣ ತುಂಡುಗಳನ್ನು ಪಂಚನಾಮೆಯ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿ ಮುಂದಿನ ಕ್ರಮಕ್ಕಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರಿಗೆ ಸಲ್ಲಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ. ಬಂಧಿಸಲಾದ ಆರೋಪಿಗಳನ್ನು ದಿನಾಂಕ:05–07–1998 ರಲ್ಲಿ ಗೌರವಾನ್ವಿತ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಹೊಸಕೋಟೆ ತಾಲ್ಲೂಕು ರವರ ಸಮಕ್ಷಮ ಹಾಜರುಪಡಿಸಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 13.5 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದಂತೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಲಾಗಿ, ಆರೋಪಿಗಳಾಗಲೀ ಅಥವಾ ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗಳಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಅವರಿಂದ ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. ಈ ಸಂಬಂಧ ಕಡೆಯದಾಗಿ ದಿನಾಂಕ:09–01–2013ರಂದು 71ಎ ನಡವಳಿಯನ್ನು ನಡೆಸಲಾಗಿ, ಆರೋಪಿಗಳು ವಿಚಾರಣೆಗೆ ಗೈರು ಹಾಜರಾಗಿದ್ದು, ಹಾಜರಿದ್ದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಶ್ರೀ.ಮುತ್ತುರಾಜು ಬಿನ್ ಲಿಂಗಯ್ಯ, ವಲಯ ಅರಣ್ಯಾಧಿಕಾರಿ, ಶ್ರೀ.ಎಸ್.ರಾಜಶೇಖರ್ ಬಿನ್ ಶಂಕರಪ್ಪ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ಎಂ.ಸಂಜೀವಪ್ಪ ಬಿನ್ ಮುನಿಯಪ್ಪ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ನಡೆಸಿ ಹೇಳಿಕೆಯನ್ನು ಸರ್ಕಾರಿ ಸಹಾಯಕ ಅಭಿಯೋಜಕರ ಸಮಕ್ಷಮ ಪಡೆಯಲಾಗಿರುತ್ತದೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ 13.5 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಸಾಗಣೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ಹಾಗೂ ಸರ್ಕಾರಿ ಪರ ಸಾಕ್ಷಿಗಳ ಹೇಳಿಕೆಗಳ ಮೇರೆಗೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 13.5 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸಾಗಣೆ ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87 ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 13.5 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:05–07–1998ರಂದು ಹೊಸಕೋಟೆಯ ಸಂತೆ ಮೈದಾನದ ಬಳಿ ಮಾಲೂರಿಗೆ ಹೋಗುವ ರಸ್ತೆಯಲ್ಲಿ ಇಬ್ಬರು ಆರೋಪಿಗಳು ಅಕ್ರಮವಾಗಿ 13.5 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಗಳು ವಿಚಾರಣಾಧಿಕಾರಿಯ ಮುಂದೆ ನೀಡಿರುವ ಹೇಳಿಕೆ ಪ್ರಕಾರ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸುತ್ತಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 13.5 ಕೆ.ಜಿ ಶ್ರೀಗಂಧದ ತುಂಡುಗಳು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 13.5 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:43/1998–99ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 13.5 ಕೆ.ಜಿ ತೂಕವುಳ್ಳ ಶ್ರೀಗಂಧದ ಇಪ್ಪತ್ತಮೂರು (23) ಸಣ್ಣ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 29–05–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.2006**
**SC.10**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ: 56/1998-99 ದಿನಾಂಕ:25/07/1998.**

**àNV¦0H1.AA¿Ã.71A.56/98-99 º¼ñNP0 29/05/2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ÀNïïñÌ º** : ವಲಯ ಅರಣ್ಯಾಧಿಕಾರಿ,ಅರಣ್ಯ ಸಂಚಾರಿದಳ, ಬೆಂಗಳೂರು.

**BÊöóÀYçô: Ap Ì ¹ñÊÊô 0** ಎ1–ಎಲ್ಲಪ್ಪ ಬಿನ್ ಪುಟ್ಟಯ್ಯ,ಕಾರ್ತಿಕಾಳು ಗ್ರಾಮ, ಚಿಕ್ಕನಾಯಕನಹಳ್ಳಿ, ತಾಲ್ಲೂಕು, ತುಮಕೂರು ಜಿಲ್ಲೆ
ಎ2–ರಾಮಯ್ಯ ಉರುಫ್ ತಾಳೆರಾಮಯ್ಯ, ಕಾರ್ತಿಕಾಳು ಗ್ರಾಮ, ಚಿಕ್ಕನಾಯಕನಹಳ್ಳಿ, ತಾಲ್ಲೂಕು, ತುಮಕೂರು ಜಿಲ್ಲೆ, (ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ).

**¿ÃPÊ§ದ ÔôôVñNÙYçô0**

1. ದಿನಾಂಕ:25–07–1998ರಂದು ಬೆಳಿಗ್ಗೆ 5.00 ಗಂಟೆಯ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ಮಲ್ಲೇಶ್ವರಂ 18ನೇ ಅಡ್ಡರಸ್ತೆ, ಸ್ಯಾಂಕಿ ಕೆರೆಯ ರಸ್ತೆಯಲ್ಲಿ ಇಬ್ಬರು ಆಸಾಮಿಗಳು ಒಂದು ಕೈಚೀಲ ಮತ್ತು ಟಾರ್‌ಪಲ್ ಚೀಲಗಳನ್ನು ತಲೆಯ ಮೇಲೆ ಹೊತ್ತುಕೊಂಡು ಅನುಮಾನಸ್ಪದವಾಗಿ ಬರುತ್ತಿದ್ದಾಗ ಸಿಬ್ಬಂದಿಗಳು ಅವರನ್ನು ತಡೆಯಲು ಯತ್ನಿಸಿದಾಗ ಒಬ್ಬ ಆಸಾಮಿ ಚೀಲಗಳನ್ನು ಬಿಸಾಡಿ ಓಡಿ ಪರಾರಿಯಾಗಿರುತ್ತಾನೆ. ಮೊತ್ತೊಬ್ಬ ಆಸಾಮಿಯನ್ನು ವಶಕ್ಕೆ ತೆಗೆದುಕೊಂಡು ಆತನ ಬಳಿ ಇದ್ದ ಚೀಲಗಳನ್ನು ಪರಿಶೀಲಿಸಲಾಗಿ, ಮರದ ಹಸಿ ತುಂಡುಗಳಾಗಿದ್ದು, ಅದರ ಸುವಾಸನೆಯಿಂದ ಅವುಗಳು ಶ್ರೀಗಂಧದ ಮರದ ತುಂಡುಗಳೆಂದು ಖಾತರಿಪಡಿಸಿಕೊಳ್ಳಲಾಯಿತು. ಈ ಬಗ್ಗೆ ಆಸಾಮಿಯನ್ನು ವಿಚಾರಿಸಲಾಗಿ, ತುಮಕೂರು ಜಿಲ್ಲೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಕಾರ್ತಿಕಾಳು ಗ್ರಾಮವಾಸಿ ಪುಟ್ಟಯ್ಯನ ಮಗ ಎಲ್ಲಪ್ಪ ಎಂದು ತಿಳಿಸಿರುತ್ತಾನೆ. ಓಡಿ ಹೋದ ಆಸಾಮಿಯ ಬಗ್ಗೆ ವಿಚಾರಿಸಲಾಗಿ, ಸದರಿ ಗ್ರಾಮದ ವಾಸಿ ರಾಮಯ್ಯ ಎಂದು ತಿಳಿಸಿರುತ್ತಾನೆ. ಶ್ರೀಗಂಧದ ತುಂಡುಗಳ ಬಗ್ಗೆ ವಿಚಾರಿಸಲಾಗಿ ಮಲ್ಲೇಶ್ವರಂ ನ ಮರವಿಜ್ಞಾನ ಮತ್ತು ಸಂಶೋಧನಾ ಕೇಂದ್ರ ಆವರಣದ ನೆಡುತೋಪಿನಲ್ಲಿದ್ದ ಶ್ರೀಗಂಧದ ಮರವನ್ನು ಇಬ್ಬರು ಸೇರಿ ಗರಗಸದಿಂದ ಕಡಿತಲೆ ಮಾಡಿ ಚೀಲಗಳಿಗೆ ತುಂಬಿರುವುದಾಗಿ ಹಾಗೂ ಸದರಿ ಶ್ರೀಗಂಧದ ತುಂಡುಗಳನ್ನು ಶೇಷಾದ್ರಿಪುರಂನಲ್ಲಿರುವ ಪ್ಯಾರೇಜಾನ್ ಎಂಬ ಆಸಾಮಿಗೆ ಮಾರಾಟ ಮಾಡಲು ಯತ್ನಿಸಿರುವುದಾಗಿ ತಿಳಿಸಿರುತ್ತಾನೆ. ಚೀಲಗಳಲ್ಲಿ ತುಂಬಿದ್ದ ಶ್ರೀಗಂಧವನ್ನು ತೂಕ ಮಾಡಲಾಗಿ, ಒಟ್ಟು 32 ಕೆ.ಜಿ ಇರುತ್ತದೆ. ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಕಡಿತಲೆ ಮಾಡಿ ಸಾಗಾಣಿಕೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ ಹಾಗೂ ಕಾನೂನಿನ ಉಲ್ಲಂಘನೆಯಾಗಿರುವುದರಿಂದ ಸದರಿ ಆರೋಪಿಯನ್ನು ಬಂಧಿಸಿ, ಆತನ ಬಳಿ ಇದ್ದ ಶ್ರೀಗಂಧವನ್ನು ಪಂಚನಾಮೆಯ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಲಾಗಿರುತ್ತದೆ.

2. ತಲೆಮರೆಸಿಕೊಂಡಿದ್ದ ಆರೋಪಿ ರಾಮಯ್ಯ ಉರುಫ್ ತಾಳೆರಾಮಯ್ಯ ಈತನನ್ನು ಪತ್ತೆಹಚ್ಚಲು ಸಿಬ್ಬಂದಿಗಳು ತನಿಖೆ ನಡೆಸುತ್ತಿದ್ದ ವೇಳೆ ದಿನಾಂಕ:02–10–1998ರಂದು ಚಿಕ್ಕನಾಯಕನಹಳ್ಳಿ ಬಸ್ ನಿಲ್ದಾಣದಲ್ಲಿ ದಸ್ತಗಿರಿ ಮಾಡಿ ನ್ಯಾಯಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ತನಿಖೆಗಾಗಿ ಒಟ್ಟು 32 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

3. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧದ ಮರವನ್ನು ಕಡಿತಲೆ ಮಾಡಿ ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 32 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

4. ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಲಾಗಿ, ಆರೋಪಿಗಳಾಗಲೀ ಅಥವಾ ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗಳಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಅವರಿಂದ ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. ಈ ಸಂಬಂಧ ಕಡೆಯದಾಗಿ ದಿನಾಂಕ:

09–01–2013ರಂದು 71ಎ ನಡವಳಿಯನ್ನು ನಡೆಸಿದ ಸಂದರ್ಭದಲ್ಲಿ ಆರೋಪಿಗಳು ಗೈರು ಹಾಜರಾಗಿದ್ದು, ಹಾಜರಿದ್ದ ಸರ್ಕಾರಿ ಪರ ಫಿರ್ಯದುದಾರರು ಮತ್ತು ಸಾಕ್ಷಿಗಳಾದ ಶ್ರೀ.ಮುತ್ತುರಾಜು ಬಿನ್ ಲಿಂಗಯ್ಯ, ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ.ಆರ್.ಶ್ರೀಧರ್, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ನಡೆಸಿ ಹೇಳಿಕೆಯನ್ನು ಸಹಾಯಕ ಸರ್ಕಾರಿ ಅಭಿಯೋಜಕರ ಸಮಕ್ಷಮ ಪಡೆಯಲಾಗಿರುತ್ತದೆ.

5. ಹಾಜರಿದ್ದ ಫಿರ್ಯಾದುದಾರರು ಹಾಗೂ ಸರ್ಕಾರಿ ಸಾಕ್ಷಿಗಳು ಸದರಿ ಪ್ರಕರಣದಲ್ಲಿ 32 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಣೆ ಮಾಡಿರುವ ಬಗ್ಗೆ ಸಾಕ್ಷಿ ನುಡಿದಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ಹಾಗೂ ಸರ್ಕಾರಿ ಪರ ಸಾಕ್ಷಿಗಳ ಹೇಳಿಕೆಗಳ ಮೇರೆಗೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 32 ಕೆ.ಜಿ ಶ್ರೀಗಂಧವನ್ನು ಹೊಂದಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87 ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 32 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:25–07–1998ರಂದು ಮಲ್ಲೇಶ್ವರಂ 18ನೇ ಅಡ್ಡರಸ್ತೆ, ಸ್ಯಾಂಕಿ ಕೆರೆಯ ರಸ್ತೆಯಲ್ಲಿ ಇಬ್ಬರು ಆರೋಪಿಗಳು ಅಕ್ರಮವಾಗಿ ಶ್ರೀಗಂಧದ ಮರವನ್ನು ಕಡಿತಲೆ ಮಾಡಿ ಒಟ್ಟು 32 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಕಡಿತಲೆ ಮಾಡಿ ಸಾಗಾಣಿಕೆ ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಗಳ ಹೇಳಿಕೆ ಪ್ರಕಾರ ಶ್ರೀಗಂಧವನ್ನು ಅಕ್ರಮವಾಗಿ ಕಡಿತಲೆ ಮಾಡಿ ಸಾಗಿಸುತ್ತಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 32 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 32 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:56/1998–99ರಲ್ಲಿ ಅಮಾನತ್ತುಪಡಿಸಿಕೊಂಡಿರುವ ಒಟ್ಟು 32 ಕೆ.ಜಿ ತೂಕವುಳ್ಳ ಶ್ರೀಗಂಧದ ನಾಲ್ಕು (04) ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:29–05–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

PR.2008
SC.10

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ:117/2005–06, ದಿನಾಂಕ: 08–02–2006.**

**àNV¦H1.AA¿Ä.71A.117/05-06 º¼ÆNP29/05/2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ÀNïïñÌ º** : ವಲಯ ಅರಣ್ಯಾಧಿಕಾರಿ,ಅರಣ್ಯ ಸಂಚಾರಿದಳ, ಬೆಂಗಳೂರು.

**BÊöóÀYçô** : ಪತ್ತೆಯಾಗಿರುವುದಿಲ್ಲ.

**ApÌ ¹ñÊÊô** :

**¿ÄPÊ§ದ ÔôôVñ¦NÙYçôò**

ದಿನಾಂಕ:08–02–2006ರಂದು ಬೆಳಗಿನ ಜಾವ 5.00 ಗಂಟೆಯ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ತುಮಕೂರು ರಸ್ತೆಯಲ್ಲಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ತುಮಕೂರು ರಸ್ತೆ ಕಡೆಯಿಂದ ಬೆಂಗಳೂರು ಕಡೆಗೆ ಅನುಮಾನಸ್ಪದವಾಗಿ ಬರುತ್ತಿದ್ದ ಅಂಬಾಜಿಡರ್ ಕಾರು ಸಂಖ್ಯೆ:ಸಿಎನ್ಎಕ್ಸ್–4175 ವಾಹನವನ್ನು ತಪಾಸಣೆ ಮಾಡಲು ನಿಲ್ಲಿಸುವಂತೆ ಸೂಚಿಸಲಾಗಿ, ಸದರಿ ವಾಹನದ ಚಾಲಕ ಹಠಾತ್ತನೆ ವಾಹನವನ್ನು ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಯ ಸಮೇತ ಪರಾರಿಯಾಗಿರುತ್ತಾನೆ. ಅವರನ್ನು ಹಿಡಿಯಲು ಸಿಬ್ಬಂದಿ ಬೆನ್ನಟ್ಟಿದರೂ ಸಹ ಅವರ ಸುಳಿವು ಪತ್ತೆಯಾಗಿರುವುದಿಲ್ಲ. ನಂತರ ವಾಹನವನ್ನು ಅಜಮಾಯಿಸಿ ನೋಡಲಾಗಿ, ವಾಹನದಲ್ಲಿ ಗೋಣಿ ಚೀಲದ ಮೂಟೆಗಳು ತುಂಬಿರುವುದು ಕಂಡುಬಂದಿರುತ್ತದೆ. ಸದರಿ ಗೋಣಿಚೀಲದ ಮೂಟೆಗಳನ್ನು ಬಿಚ್ಚಿ ನೋಡಲಾಗಿ, ಮರದ ತೊಗಟೆಯ ಚಕ್ಕೆ ಇದ್ದು, ಈ ಚಕ್ಕೆಗಳನ್ನು ಗುರ್ತಿಸಲಾಗಿ, ಅದರ ಸುವಾಸನೆ ಮತ್ತು ಭೌತಿಕ ಗುಣ ಲಕ್ಷಣಗಳಿಂದ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆ ಎಂದು ಖಚಿತಪಡಿಸಿಕೊಳ್ಳಲಾಗಿರುತ್ತದೆ. ನಂತರ ವಾಹನವನ್ನು ಪರಿಶೀಲಿಸಲಾಗಿ, ವಾಹನವು ಬಿಳಿ ಬಣ್ಣದ ಹಳೆಯ ಅಂಬಾಜಿಡರ್ ಕಾರು ಆಗಿದ್ದು, ವಾಹನ ಸಂಖ್ಯೆ:ಸಿಎನ್ಎಕ್ಸ್–4175 ಎಂದು ಇರುತ್ತದೆ. ಚಾಸಿಸ್ ಸಂಖ್ಯೆ:111–434709 ಮತ್ತು ಇಂಜಿನ್ ಸಂಖ್ಯೆ:OEW07443 Type Amba-OHV ಎಂದು ನಮೂದಾಗಿರುತ್ತದೆ. ಕಾರಿನ ಡಿಕ್ಕಿ, ಹಿಂಭಾಗದ ಸೀಟು ಮತ್ತು ಮುಂದಿನ ಸೀಟಿನ ಜಾಗದಲ್ಲಿ ಗೋಣಿ ಚೀಲಗಳಲ್ಲಿ ಚಕ್ಕೆಯನ್ನು ತುಂಬಿ ಇಟ್ಟಿರುವುದು ಕಂಡುಬಂದಿದ್ದು, ಸದರಿ ಚೀಲಗಳನ್ನು ಎಣಿಕೆ ಮಾಡಲಾಗಿ, ಒಟ್ಟು 11 ಮೂಟೆಗಳಿದ್ದು, ಅಂದಾಜು ತೂಕ 500 ಕೆ.ಜಿ ಇರುತ್ತದೆ. ವಾಹನ ಹಾಗೂ ಮಾಲಿಗೆ ಸಂಬಂಧಿಸಿದಂತೆ ಅಗತ್ಯ ದಾಖಲೆಗಳು ಸದರಿ ಕಾರಿನಲ್ಲಿ ಲಭ್ಯವಾಗಿರುವುದಿಲ್ಲ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ಉಲ್ಲಂಘನೆಯಾಗಿರುವ ಕಾರಣ, ಅಂಬಾಜಿಡರ್ ಕಾರು ಸಂಖ್ಯೆ:ಸಿಎನ್ಎಕ್ಸ್–4175 ವಾಹನವನ್ನು ಹಾಗೂ 500 ಕೆ.ಜಿ ಗುಳಿಮಾವು ಮತ್ತು ದಾಲ್ಚಿನ್ನಿ (ಎಲಗ) ಮರದ ಮಿಶ್ರಿತ ಚಕ್ಕೆಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ವಾಹನ ಮತ್ತು ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

ಪ್ರಕರಣದ ತನಿಖೆ ನಡೆಸಿದ ವಲಯ ಅರಣ್ಯಾಧಿಕಾರಿಗಳು ಆರೋಪಿಗಳು ಪತ್ತೆಯಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ ಅಂಬಾಜಿಡರ್ ಕಾರು ಸಂಖ್ಯೆ:ಸಿಎನ್ಎಕ್ಸ್–4175 ವಾಹನವನ್ನು ಹಾಗೂ ಅದರಲ್ಲಿದ್ದ 500 ಕೆ.ಜಿ ಗುಳಿಮಾವು ಮತ್ತು ದಾಲ್ಚಿನ್ನಿ (ಎಲಗ) ಮರದ ಮಿಶ್ರಿತ ಚಕ್ಕೆಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಕಛೇರಿಯಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಕಲೇಶಪುರ, ಹಾಸನ ಇವರ ಕಛೇರಿಗೆ ದಿನಾಂಕ:25–07–2007ರಂದು ಪತ್ರ ವ್ಯವಹರಿಸಿ ವಾಹನ ನೊಂದಣಿ ಸಂಖ್ಯೆ:ಸಿಎನ್ಎಕ್ಸ್–4175 ಅಂಬಾಜಿಡರ್ ಕಾರಿನ ಮಾಲೀಕತ್ವದ ವಿವರಗಳನ್ನು ನೀಡುವಂತೆ ಕೋರಲಾಗಿತ್ತು. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಕಲೇಶಪುರ, ಹಾಸನ ಇವರು ತಮ್ಮ ಕಛೇರಿಯ ಪತ್ರ ಸಂಖ್ಯೆ:ಸ.ಪ್ರಾ.ಸಾ.ಅ/ ಸ.ಪುರ/ವಾ.ಸಂ.ಸಿಎನ್ಎಕ್ಸ್–4175/07–08, ದಿನಾಂಕ:27–08–2007ರಲ್ಲಿ ವಾಹನದ ಮಾಲೀಕರ ವಿವರವನ್ನು ಒದಗಿಸಿದ್ದು, ಅದರಂತೆ ವಾಹನವು ಶ್ರೀ.ಅಬ್ದುಲ್ ರಹಮಾನ್ ಬಿನ್ ಪಿ.ಉಸ್‌ಮಾನ್, ಚಂಪಕನಗರ ಬಡಾವಣೆ, ಸಕಲೇಶಪುರ, ಹಾಸನ ಜಿಲ್ಲೆ ಇವರ ಹೆಸರಿನಲ್ಲಿ ಮಾಲೀಕತ್ವ ವರ್ಗಾವಣೆಗೊಂಡಿರುವುದಾಗಿ ತಿಳಿಸಿರುತ್ತಾರೆ. ಈ ಸಂಬಂಧ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ರಡಿ ಕಾರಣ ಕೇಳುವ ನೋಟೀಸನ್ನು ದಿನಾಂಕ:11–12–2012ರಂದು ನೊಂದಾಯಿತ ಅಂಚೆ ಮುಖಾಂತರ ಶ್ರೀ.ಅಬ್ದುಲ್ ರಹಮಾನ್ ಬಿನ್ ಪಿ.ಉಸ್‌ಮಾನ್, ಚಂಪಕನಗರ ಬಡಾವಣೆ, ಸಕಲೇಶಪುರ, ಹಾಸನ ಜಿಲ್ಲೆ ಇವರಿಗೆ ಕಳುಹಿಸಿ ಹದಿನೈದು ದಿವಸದೊಳಗಾಗಿ ಸೂಕ್ತ ದಾಖಲೆಯೊಂದಿಗೆ ಪ್ರಾಧಿಕಾರದ ಸಮಕ್ಷಮ ಹಾಜರಾಗುವಂತೆ ಸೂಚಿಸಲಾಗಿತ್ತು. ಸದರಿ ಅಂಚೆ ಲಕೋಟೆಯನ್ನು ವಾಹನದ ಮಾಲೀಕರು ದಿನಾಂಕ:14–12–2012ರಂದು ಪಡೆದ ಬಗ್ಗೆ ಸ್ವೀಕೃತಿ ಈ ಕಛೇರಿಗೆ ತಲುಪಿರುತ್ತದೆ. ಆದರೆ ನಿಗದಿತ ಅವಧಿಯೊಳಗೆ ವಾಹನದ ಮಾಲೀಕರು ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾದ ಕಾರಣ, ದಿನಾಂಕ:26–12–2012ರಲ್ಲಿ ನೊಂದಾಯಿತ ಅಂಚೆ ಮುಖಾಂತರ ದಿನಾಂಕ:09–01–2013ರಂದು 71ಎ ನ್ಯಾಯಾಲಯದ ನಡವಳಿಯಲ್ಲಿ ಹಾಜರಾಗಲು ಸಮನ್ಸ್ ಜಾರಿಮಾಡಲಾಯಿತು. ಆದರೆ, ಸದರಿ ಅಂಚೆ ಲಕೋಟೆಯನ್ನು ಸದರಿಯವರು ಸ್ವೀಕರಿಸದೇ ನಿರಾಕರಿಸಿದ ಕಾರಣ ಲಕೋಟೆಯನ್ನು ಈ ಕಛೇರಿಗೆ ಹಿಂದಿರುಗಿಸಲಾಗಿರುತ್ತದೆ. ತದನಂತರ ಸದರಿ ಪ್ರಕರಣವನ್ನು ದಿನಾಂಕ:29–05–2013ಕ್ಕೆ ಮುಂದೂಡಿ ವಿಚಾರಣೆ ನಡೆಸಿದ ಸಂದರ್ಭದಲ್ಲಿಯೂ ಸಹ ವಾಹನದ ಮಾಲೀಕರಾದ ಶ್ರೀ.ಅಬ್ದುಲ್ ರಹಮಾನ್ ಬಿನ್ ಪಿ.ಉಸ್‌ಮಾನ್ ಇವರು ವಿಚಾರಣೆಗೆ ಗೈರು ಹಾಜರಾಗಿರುತ್ತದೆ. ಈ ಎಲ್ಲಾ ಅಂಶಗಳಿಂದಾಗಿ ಸದರಿ ಮಾಲು ಹಾಗೂ ವಾಹನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ವಾಹನದ ಮಾಲೀಕರು ಆಕ್ಷೇಪಣೆಯನ್ನು ಪ್ರಾಧಿಕಾರದ ಮುಂದೆ ಸಲ್ಲಿಸದೇ ಇರುವ ಕಾರಣ, ವಿಚಾರಣೆಯಲ್ಲಿ ವಾಹನದ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಶ್ರೀ.ಕೆ.ನಾಗರಾಜು ಬಿನ್ ಲೇಟ್.ಕಾಳಯ್ಯ, ವಲಯ ಅರಣ್ಯಾಧಿಕಾರಿ, ಶ್ರೀ.ಆರ್.ರಮೇಶ್ ಬಿನ್ ಲೇಟ್.ರಾಮಾಂಜನಪ್ಪ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಸೈಯದ್ ಬೀರಾಮ್ ಬಿನ್ ಲೇಟ್.ಹಸೇನ್ ಖಾನ್, ಅರಣ್ಯ ರಕ್ಷಕ, ಶ್ರೀ.ಎಸ್.ಕೆ.ರವಿ ಬಿನ್ ಕಾಳಯ್ಯ, ಅರಣ್ಯ ರಕ್ಷಕ ಹಾಗೂ ಶ್ರೀ.ಎಂ.ಡಿ.ಮಂದಣ್ಣ ಬಿನ್ ಎಂ.ಎನ್.ದೇವಯ್ಯ, ವಾಹನ ಚಾಲಕ ಇವರುಗಳ ಮುಖ್ಯ ವಿಚಾರಣೆಯನ್ನು ನಡೆಸಿ ಹೇಳಿಕೆಯನ್ನು ಸಹಾಯಕ ಸರ್ಕಾರಿ ಅಭಿಯೋಜಕರ ಸಮಕ್ಷಮ ಪಡೆಯಲಾಗಿರುತ್ತದೆ.

ಸರ್ಕಾರಿ ಪರ ಎಲ್ಲಾ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿದ್ದು, ಹಾಜರಿದ್ದ ಫಿರ್ಯಾದುದಾರರು ಹಾಗೂ ಸಾಕ್ಷಿಗಳು ಪ್ರಕರಣದಲ್ಲಿ ವಾಹನ ಸಂಖ್ಯೆ:ಸಿಎನ್‌ಎಕ್ಸ್–4175 ಅಂಬಾಜಿಡರ್ ಕಾರು ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆಯ ಅಕ್ರಮ ಸಾಗಣೆಯಲ್ಲಿ ಒಳಗೊಂಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹಾಗೂ ವಾಹನದ ವಾರಸ್ಸುದಾರರು ಯಾವುದೇ ಆಕ್ಷೇಪಣೆಯನ್ನು ಸಲ್ಲಿಸದೇ ವಿಚಾರಣಾ ದಿನಗಳಂದು ಗೈರು ಹಾಜರಾಗಿರುವ ಕಾರಣ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಬಗ್ಗೆ ಸರ್ಕಾರಿ ವಕೀಲರು ಮಂಡಿಸಿದ ವಾದ ಮತ್ತು ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

1. ವಾಹನ ಸಂಖ್ಯೆ:ಸಿಎನ್‌ಎಕ್ಸ್–4175 ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ನಿಯಮ 1969 ಗಳ ಉಲ್ಲಂಘನೆ ಮಾಡಿ ಅಕ್ರಮವಾಗಿ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆಯ ಅಕ್ರಮ ಸಾಗಣೆಯಲ್ಲಿ ಒಳಗೊಂಡಿರುವುದೇ?
2. ಸದರಿ ಪ್ರಕರಣದಲ್ಲಿ ವಾಹನ ಸಂಖ್ಯೆ:ಸಿಎನ್‌ಎಕ್ಸ್–4175 ಅನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?
3. ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

1. ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
2. ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
3. ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

ದಿನಾಂಕ:08–02–2006ರಂದು ಬೆಳಗಿನ ಜಾವ 5.00 ಗಂಟೆಯ ಸಮಯದಲ್ಲಿ ಅಂಬಾಜಿಡರ್ ಕಾರು ಸಂಖ್ಯೆ:ಸಿಎನ್‌ಎಕ್ಸ್–4175 ವಾಹನವನ್ನು ತಪಾಸಣೆ ಮಾಡಲು ನಿಲ್ಲಿಸುವಂತೆ ಸೂಚಿಸಲಾಗಿ, ಸದರಿ ವಾಹನದ ಚಾಲಕ ಹಠಾತ್ತನೆ ವಾಹನವನ್ನು ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಯ ಸಮೇತ ಪರಾರಿಯಾಗಿರುವುದು, ವಾಹನದಲ್ಲಿ ಅಕ್ರಮವಾಗಿ 500 ಕೆ.ಜಿ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆ ಇರುವುದು ಕಂಡುಬಂದಿದ್ದು, ಅರಣ್ಯ ಕಾಯ್ದೆಯ ಪ್ರಕಾರ ಸದರಿ ಮಾಲನ್ನು ಸಾಗಣೆ ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ವಾಹನದಲ್ಲಿ ದೊರಕದೇ ಇರುವುದರಿಂದ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು, ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ರಡಿ ಕಾರಣ ಕೇಳುವ ನೋಟೀಸನ್ನು ನೊಂದಾಯಿತ ಅಂಚೆ ಮುಖಾಂತರ ಶ್ರೀ.ಅಬ್ದುಲ್ ರಹಮಾನ್ ಬಿನ್ ಪಿ.ಉಸ್ಮಾನ್, ಚಂಪಕನಗರ ಬಡಾವಣೆ, ಸಕಲೇಶಪುರ, ಹಾಸನ ಜಿಲ್ಲೆ ಇವರಿಗೆ ಕಳುಹಿಸಿ ನಿಗಧಿತ ಅವಧಿಯೊಳಗೆ ಸೂಕ್ತ ದಾಖಲೆಯೊಂದಿಗೆ ಪ್ರಾಧಿಕಾರದ ಸಮಕ್ಷಮ ಹಾಜರಾಗುವಂತೆ ಸೂಚಿಸಲಾಗಿದ್ದರೂ ಸಹ ವಾಹನದ ಮಾಲೀಕರು ನಿಗಧಿತ ಅವಧಿಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ.

ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳು ಸಹ ಸದರಿ ವಾಹನವು ಅಕ್ರಮವಾಗಿ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆ ಸಾಗಣೆ ಮಾಡುತ್ತಿದ್ದದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಸದರಿ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆ ಮಾಡಿರುವುದು ಖಾತರಿಯಾಗಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ರಾಜ್ಯ ಸರ್ಕಾರ ಸ್ವತ್ತಾದ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆಗೆ ಸಂಬಂಧಪಟ್ಟ ಅರಣ್ಯ ಮೊಕದ್ದಮೆಯಲ್ಲಿ ಒಳಗೊಂಡ ವಾಹನವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ವಾಹನವನ್ನು ಮತ್ತು ಸರ್ಕಾರದ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:117/2005–06ರಲ್ಲಿ ಅಮಾನತ್ತುಪಡಿಸಿಕೊಂಡಿರುವ 500 ಕೆ.ಜಿ ದಾಲ್ಚಿನ್ನಿ (ಎಲಗ) ಮತ್ತು ಗುಳಿಮಾವು ಚಕ್ಕೆ ಹಾಗೂ ಅಂಬಾಜಿಡರ್ ಕಾರು ಸಂಖ್ಯೆ:ಸಿಎನ್‌ಎಕ್ಸ್–4175 ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 29–05–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.2007**
**SC.10**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ: 177/1990-91 ದಿನಾಂಕ:15/10/1990.**

**àNV0H1.AA¿Ï.71A.177/90-91 º¼ñNP0 11/07/2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ÀNïïñÌº** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ApÌ¹ñÊÊô** : ರಾಮದಿನ್ ಬಿನ್ ಬಿನ್‌ಜಾರಾಂ, ನಂ.15, 1ನೇ ಕ್ರಾಸ್, ಪೆನ್‌ಶನ್ ಮೊಹಲ್ಲಾ, ಮೈಸೂರು ರಸ್ತೆ, ಬೆಂಗಳೂರು.
**BÊöóÀYçô 0** (ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸಿದೆ).

ಲಕ್ಷ್ಮಿನಾರಾಯಣ ಬಿನ್ ವೆಂಕಟಪ್ಪ, ಗುಡೇಮಾರನಹಳ್ಳಿ, ಚಿಂತಾಮಣಿ ತಾಲ್ಲೂಕು, ಚಿಂತಾಮಣಿ (ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸಿದೆ).

**¿ÍPÊ§ದ ÔôôVñÑÙYçô0**

1. ದಿನಾಂಕ:15–10–1989ರಂದು ಖಚಿತ ಮಾಹಿತಿಯ ಮೇಲೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಬೆಂಗಳೂರು ನಗರದ ಮೈಸೂರು ರಸ್ತೆಯ ಪೆನ್‌ಶನ್ ಮೊಹಲ್ಲಾದ 1ನೇ ಕ್ರಾಸಿನ ನಂ.9 ಫಜಲ್ ಅಂಗಡಿ ಮುಂದೆ ಕಾಯುತ್ತಿದ್ದಾಗ ಅನುಮಾನಸ್ಪದವಾಗಿ ಆರು ಗೋಣಿಚೀಲಗಳನ್ನು ಇಟ್ಟುಕೊಂಡು ನಿಂತಿದ್ದ ಇಬ್ಬರು ಆಸಾಮಿಗಳನ್ನು ಹಿಡಿದು ಗೋಣಿಚೀಲಗಳನ್ನು ಅಜಮಾಯಿಸಿ ನೋಡಲಾಗಿ, ಚೀಲಗಳಲ್ಲಿ ಒಟ್ಟು ಶ್ರೀಗಂಧದ ಹಸಿ ಮರದ ತುಂಡು ಮತ್ತು ಚಕ್ಕೆಗಳಿರುವುದು ಕಂಡುಬಂದಿದ್ದು, ಈ ಬಗ್ಗೆ ಆಸಾಮಿಗಳನ್ನು ವಿಚಾರಿಸಲಾಗಿ, ಒಂದನೇ ಅಸಾಮಿ ರಾಮದಿನ್ ಬಿನ್ ಬಿನ್‌ಜಾರಂ, ವಯಸ್ಸು 20 ವರ್ಷ, ನಂ.15, 1ನೇ ಕ್ರಾಸ್, ಪೆನ್‌ಶನ್ ಮೊಹಲ್ಲಾ, ಮೈಸೂರು ರಸ್ತೆ, ಬೆಂಗಳೂರು ಎಂದೂ ಹಾಗೂ ಎರಡನೇ ಆಸಾಮಿ ಲಕ್ಷ್ಮಿನಾರಾಯಣ ಬಿನ್ ವೆಂಕಟಪ್ಪ, ವಯಸ್ಸು 20 ವರ್ಷ, ಗುಡೇಮಾರನಹಳ್ಳಿ, ಚಿಂತಾಮಣಿ ತಾಲ್ಲೂಕು, ಚಿಂತಾಮಣಿ ಎಂಬುದಾಗಿ ತಿಳಿಸಿರುತ್ತಾರೆ. ನಂತರ ಶ್ರೀಗಂಧವನ್ನು ಸಾಗಣೆ ಮಾಡಲು ಹಾಗೂ ಹೊಂದಲು ಅರಣ್ಯ ಇಲಾಖೆಯ ರಹದಾರಿ ಮತ್ತು ಪರವಾನಗಿಯ ಬಗ್ಗೆ ವಿಚಾರಿಸಲಾಗಿ, ತಮ್ಮ ಬಳಿ ಯಾವುದೇ ವಿಧವಾದ ದಾಖಲೆಗಳು ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಶ್ರೀಗಂಧವನ್ನು ಪರಿಶೀಲಿಸಲಾಗಿ, ಒಟ್ಟು ಹತ್ತು ಶ್ರೀಗಂಧದ ಮರದ ಹಸಿ ತುಂಡುಗಳು ಹಾಗೂ ಚಕ್ಕೆಗಳಿದ್ದು, ಇವುಗಳ ತೂಕ ಒಟ್ಟು 200 ಕೆ.ಜಿ ಇರುತ್ತದೆ. ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ಸಾಗಣೆ ಮಾಡುವುದು ಹಾಗೂ ಹೊಂದುವುದು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ನಿಯಮ 1969ರ ನಿಮಯ ಉಲ್ಲಂಘನೆ ಮೇರೆಗೆ ಸದರಿ ಇಬ್ಬರು ಆರೋಪಿಯನ್ನು ದಸ್ತಗಿರಿ ಮಾಡಿ ಅವರ ಬಳಿ ಇದ್ದ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

2. ಬಂಧಿಸಲಾದ ಆರೋಪಿಗಳನ್ನು ಮಾನ್ಯ 7ನೇ ಎ.ಸಿ.ಎಂ.ಎಂ ನ್ಯಾಯಾಲಯ, ಬೆಂಗಳೂರು ನಗರ ರವರ ಸಮಕ್ಷಮ ಹಾಜರುಪಡಿಸಿ ನಂತರ ಆರೋಪಿಗಳನ್ನು ನ್ಯಾಯಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ತನಿಖೆಗಾಗಿ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

3. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 200 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

4. ಪ್ರಕರಣಕ್ಕೆ ಸಂಬಂಧಿಸಿದಂತೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಲಾಗಿ, ಆರೋಪಿಗಳಾಗಲೀ ಅಥವಾ ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗಳಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಅವರಿಂದ ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. 71ಎ ನಡವಳಿ ದಿನಾಂಕಗಳಂದು ಆರೋಪಿಗಳು ವಿಚಾರಣೆಗೆ ಗೈರು ಹಾಜರಾದ ಕಾರಣ, ಹಾಜರಿದ್ದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಶ್ರೀ.ಬಿ.ರಾಜು, ನಿವೃತ್ತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ), ಶ್ರೀ.ಕೆ.ಯು.ಪೋತಪ್ಪ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಟಿ.ಎಸ್.ಶಿವಾನಂದ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ಎಸ್.ಎನ್.ರಂಗಯ್ಯ, ನಿವೃತ್ತ ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು ರವರ ಸಮಕ್ಷಮ ಪಡೆಯಲಾಗಿರುತ್ತದೆ. ಆರೋಪಿಗಳಾಗಲೀ ಅಥವಾ ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಪಾಟಿ ಸವಾಲು ಇರುವುದಿಲ್ಲವೆಂದು ಪರಿಗಣಿಸಲಾಯಿತು.

5. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ 200 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಣೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

7(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧದ ಮರದ ತುಂಡುಗಳು ಹಾಗೂ ಚಕ್ಕೆಯನ್ನು ಸಾಗಣೆ ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87 ರ ಉಲ್ಲಂಘನೆಯಾಗಿದೆಯೇ?

7(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧದ ಮರದ ತುಂಡುಗಳು ಹಾಗೂ ಚಕ್ಕೆ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

7(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

7(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

8. ದಿನಾಂಕ:15–10–1989ರಂದು ಬೆಂಗಳೂರು ನಗರದ ಮೈಸೂರು ರಸ್ತೆಯ ಪೆನ್‌ಶನ್ ಮೊಹಲ್ಲಾದ 1ನೇ ಕ್ರಾಸಿನ ನಂ.9 ಫಜಲ್ ಅಂಗಡಿ ಮುಂದೆ ಅಕ್ರಮವಾಗಿ 200 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳು ಹಾಗೂ ಚಕ್ಕೆಯನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಗಳ ಹೇಳಿಕೆ ಪ್ರಕಾರ ಶ್ರೀಗಂಧವನ್ನು ಅಕ್ರಮವಾಗಿ ಹೊಂದಿ ಸಾಗಿಸುತ್ತಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 200 ಕೆ.ಜಿ ಶ್ರೀಗಂಧದ ಮರದ ಹಸಿ ತುಂಡುಗಳು ಹಾಗೂ ಚಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

9. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 200 ಕೆ.ಜಿ ಶ್ರೀಗಂಧದ ಮರದ ತುಂಡುಗಳು ಹಾಗೂ ಚಕ್ಕೆಯನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:177/1990–91ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 200 ಕೆ.ಜಿ ಶ್ರೀಗಂಧದ ಮರದ ಹತ್ತು (10) ತುಂಡುಗಳು ಹಾಗೂ ಚಕ್ಕೆಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:11–07–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.2012**
**SC.10**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**AÊ§Ã A¿Êñ¹ ÔöP¹Ôô àNVÃ188/1999-00 º¼ñNPÃ20/03/2000.**

**àNVÃH1.H¿ýKá.188/1999-00 º¼ñNPÃ11-07-2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ಫಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**BÊöóÀ** : ಅಫ್ಜಲ್ ಬಿನ್ ಶಂಶುದ್ದೀನ್, 3ನೇ ಅಡ್ಡರಸ್ತೆ, ಗುರಪ್ಪನಪಾಳ್ಯ, ಬೆಂಗಳೂರು. (ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ).

**¿ÍPÊ§ ÔôôVñÑÙYçôÃ**

1. ದಿನಾಂಕ:19–03–2000 ರಂದು ರಾತ್ರಿ ಸಮಯದಲ್ಲಿ ದೊರೆಸಾನಿಪಾಳ್ಯ ಅರಣ್ಯ ಸಂಶೋಧನಾ ಕ್ಷೇತ್ರದಲ್ಲಿ ಶ್ರೀಗಂಧ ಮರಗಳ ಅಕ್ರಮ ಕಡಿತಲೆಯಾಗುತ್ತಿದೆ ಎಂಬ ಬಗ್ಗೆ ವರ್ತಮಾನದ ಮೇರೆಗೆ ಸದರಿ ದಿನದಂದು ರಾತ್ರಿವೇಳೆಯಲ್ಲಿ ಬೆಂಗಳೂರು ಅರಣ್ಯ ಸಂಚಾರಿ ದಳದ ಸಿಬ್ಬಂದಿ ಹಾಗೂ ದೊರೆಸಾನಿಪಾಳ್ಯ ಅರಣ್ಯ ಸಂಶೋಧನಾ ವಲಯದ ಸಿಬ್ಬಂದಿ ಗಸ್ತು ಮಾಡುತ್ತಿದ್ದಾಗ ರಾತ್ರಿ ಸುಮಾರು 1.00 ಗಂಟೆಯ ಸಮಯದಲ್ಲಿ ಸಸ್ಯಕ್ಷೇತ್ರದ ಬಿದಿರು ನೆಡುತೋಪಿನ ಭಾಗದಲ್ಲಿ ಮರ ಕೊಯ್ಯುತ್ತಿರುವ ಶಬ್ಧ ಕೇಳಿ ಅಲ್ಲಿ ಹೋಗಿ ನೋಡಲಾಗಿ, ಕೆಲವು ದುಷ್ಕರ್ಮಿಗಳು ಮರ ಕೊಯ್ಯುತ್ತಿರುವುದು ಕಂಡುಬಂದಿರುತ್ತದೆ. ಇಲಾಖಾ ಸಿಬ್ಬಂದಿಗಳು ದುಷ್ಕರ್ಮಿಗಳ ಬಳಿ ಹೋದಾಗ ಮೂರು ಜನ ಆಸಾಮಿಗಳು ಇರುವುದು ಕಂಡುಬಂದಿದ್ದು, ಒಬ್ಬ ಆಸಾಮಿಯು ಗರಗಸದಿಂದ ಅರಣ್ಯ ರಕ್ಷಕರ ಮೇಲೆ ಹಲ್ಲೆ ನಡೆಸಿರುತ್ತಾನೆ. ಆಗ ವನಪಾಲಕರು ಗಾಳಿಯಲ್ಲಿ ಗುಂಡು

ಹಾರಿಸಲಾಗಿ, ಮೂರು ಜನ ಆರೋಪಿಗಳು ಓಡಿ ಹೋಗಲು ಯತ್ನಿಸಿದಾದ ಸಿಬ್ಬಂದಿಗಳು ಅವರುಗಳನ್ನು ಹಿಂಬಾಲಿಸಿ ಒಬ್ಬ ಆಸಾಮಿಯನ್ನು ವಶಕ್ಕೆ ಪಡೆದಿದ್ದು, ಉಳಿದ ಇಬ್ಬರು ಆಸಾಮಿಗಳು ಓಡಿ ಪರಾರಿಯಾಗಿರುತ್ತಾರೆ. ತದನಂತರ ಸಸ್ಯಕ್ಷೇತ್ರದಲ್ಲಿ ಪರಿಶೀಲಿಸಲಾಗಿ, ಐದು ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಆಸಾಮಿಯನ್ನು ವಿಚಾರಿಸಲಾಗಿ ತನ್ನ ಹೆಸರು ಅಫ್ಜಲ್ ಬಿನ್ ಶಂಶುದ್ದೀನ್, ವಯಸ್ಸು 33 ವರ್ಷ, 3ನೇ ಅಡ್ಡರಸ್ತೆ, ಗುರಪ್ಪನಪಾಳ್ಯ, ಬೆಂಗಳೂರು ಎಂದೂ ಹಾಗೂ ತನ್ನೊಂದಿಗೆ ಇಬ್ಬರು ಆಸಾಮಿಗಳಾದ ಬಿಲ್ಮಿಲ್ಲಾನಗರದ ಮೆಹಬೂಬ್ ಹಾಗೂ ಫಾರೂಕ್ ಎಂಬುವವರು ಸದರಿ ಸಸ್ಯಕ್ಷೇತ್ರದಲ್ಲಿ ಶ್ರೀಗಂಧದ ಮರಗಳನ್ನು ಕಡಿದು ತೆಗೆದುಕೊಂಡು ಹೋಗಲು ಬಂದಿದ್ದೆವೆಂದು ಹೇಳಿಕೆ ನೀಡಿರುತ್ತಾನೆ. ಆರೋಪಿಗಳು ಅಕ್ರಮವಾಗಿ ಕಡಿತಲೆ ಮಾಡಿದ್ದ ಶ್ರೀಗಂಧದ ತುಂಡುಗಳನ್ನು ಪರಿಶೀಲಿಸಲಾಗಿ, ಒಟ್ಟು 06 ತೊಗಟೆಯುಳ್ಳ ಹಸಿ ಶ್ರೀಗಂಧದ ತುಂಡುಗಳಿದ್ದು, ಇವುಗಳ ಒಟ್ಟು ತೂಕ 50 ಕೆ.ಜಿ ಇರುತ್ತದೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969 ಉಲ್ಲಘಿಸಿರುವ ಕಾರಣ, ಅಫ್ಜಲ್ ಬಿನ್ ಶಂಶುದ್ದೀನ್ ಈತನನ್ನು ಬಂಧಿಸಿ ಒಟ್ಟು 50 ಕೆ.ಜಿ ತೂಕವುಳ್ಳ ಶ್ರೀಗಂಧದ ತುಂಡುಗಳನ್ನು ಪಂಚನಾಮೆ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ದಿನಾಂಕ:20-03-2000ರಂದು ಅರಣ್ಯ ಮೊಕದ್ದಮೆ ದಾಖಲಿಸಿರುತ್ತಾರೆ.

2. ಬಂಧಿಸಲಾದ ಆರೋಪಿಯನ್ನು ಮಾನ್ಯ 2ನೇ ಎ.ಸಿ.ಎಂ.ಎಂ ನ್ಯಾಯಾಲಯಕ್ಕೆ ಹಾಜರುಪಡಿಸಿ, ನಂತರ ನ್ಯಾಯಾಲಯದ ಆದೇಶದಂತೆ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ತನಿಖೆಗಾಗಿ ಒಟ್ಟು 50 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

3. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84, 86, 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 50 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

4. ಪ್ರಕರಣಕ್ಕೆ ಸಂಬಂಧಿಸಿದಂತೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಲಾಗಿ, ಆರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. ಈ ಸಂಬಂಧ ದಿನಾಂಕ:09-01-2013 ಹಾಗೂ 20-06-2013ರಂದು 71ಎ ನಡವಳಿಯನ್ನು ನಡೆಸಲಾಗಿ, ಆರೋಪಿ ವಿಚಾರಣೆಗೆ ಗೈರು ಹಾಜರಾದ ಕಾರಣ, ಹಾಜರಿದ್ದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಶ್ರೀ.ಗೋಪಾಲ ಕೃಷ್ಣ ರಾವ್.ಎಸ್, ಬಿನ್ ನಾಗರಾಜ್ ರಾವ್, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ವಿಜಯ್ ಕುಮಾರ್ ಬಿನ್ ನರಸೋಜಿರಾವ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ) ಇವರುಗಳ ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರ ಸಮಕ್ಷಮ ಪಡೆಯಲಾಗಿರುತ್ತದೆ. ಅರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಪಾಟಿ ಸವಾಲು ಇರುವುದಿಲ್ಲವೆಂದು ಪರಿಗಣಿಸಲಾಯಿತು.

5. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಅಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ಒಟ್ಟು 50 ಕೆ.ಜಿ ಶ್ರೀಗಂಧದವನ್ನು ಸಂಗ್ರಹಿಸಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಉಳಿದ ಸಾಕ್ಷಿಗಳ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದವನ್ನು ಮಂಡಿಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರು ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

7(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 50 ಕೆ.ಜಿ ತೊಗಟೆಯುಳ್ಳ ಹಸಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಕಡಿದು ಸಂಗ್ರಹಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84, 86, 87 ರ ಉಲ್ಲಂಘನೆಯಾಗಿದೆಯೇ?

7(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 50 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

7(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

7(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

8. ದಿನಾಂಕ:19-03-2000 ರಂದು ದೊರೆಸಾನಿಪಾಳ್ಯ ಅರಣ್ಯ ಸಂಶೋಧನಾ ಕ್ಷೇತ್ರದಲ್ಲಿ ಅಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿದು ಸಂಗ್ರಹಣೆ ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಕಡಿತಲೆ ಮಾಡಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ

ನೀಡಿರುತ್ತಾರೆ. ಆರೋಪಿಯ ಹೇಳಿಕೆ ಪ್ರಕಾರ ಶ್ರೀಗಂಧದ ಮರಗಳನ್ನು ಅಕ್ರಮವಾಗಿ ಕಡಿತಲೆ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 50 ಕೆ.ಜಿ ಶ್ರೀಗಂಧದ ತುಂಡುಗಳು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

9. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 50 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:188/1999–00ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 50 ಕೆ.ಜಿ ತೊಗಟೆಯುಳ್ಳ ಶ್ರೀಗಂಧದ ಆರು (06) ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 11–07–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.2011**
**SC.10**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ:220/1993-94 ದಿನಾಂಕ: 23/09/1993.**

**àNV¦0H1.AA¿|.71A.220/93-94 °¼ïNP011-07-2013.**

**E¿á¬Êô** : ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ÀNïïñÌ°** : ವಲಯ ಅರಣ್ಯಾಧಿಕಾರಿ,ಅರಣ್ಯ ಸಂಚಾರಿದಳ, ಬೆಂಗಳೂರು.

**BÊöóÀ** : ಎ1–ಮಣಿ ಬಿನ್ ಆಂತೋನಿ, ತಿರುವಣಮಲ್ಲೈ, ಮಾರಮ್ಮ ಕೋಯಿಲ್, ತೆರಿಯಾರ್, ತಮಿಳುನಾಡು.
(ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ).

**¿|PÊ§ದ ÔôôVñNÙYçô0**

1. ದಿನಾಂಕ:23–09–1993ರಂದು ಮಧ್ಯಾಹ್ನ 1.30 ಗಂಟೆ ಸಮಯದಲ್ಲಿ ಅತ್ತಿಬೆಲೆ–ಸರ್ಜಾಪುರ ರಸ್ತೆಯ ಎಸ್.ಮೇಡಹಳ್ಳಿ ಗ್ರಾಮದ ಬಸ್ ನಿಲುಗಡೆ ಬಳಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ತಪಾಸಣಾ ಕಾರ್ಯದಲ್ಲಿ ನಿರತರಾಗಿದ್ದಾಗ ಎ.ಎಸ್.ಟಿ.ಸಿ ಬಸ್ಸಿನಿಂದ ಒಬ್ಬ ಆಸಾಮಿ ಇಳಿದು ತಲೆಯ ಮೇಲೆ ಒಂದು ಪ್ಲಾಸ್ಟಿಕ್ ಚೀಲ, ಹೆಗಲ ಮೇಲೆ ಮತ್ತೊಂದು ಚೀಲವನ್ನು ಹಾಗೂ ಏರ್ ಬ್ಯಾಗನ್ನು ಜೋತುಹಾಕಿಕೊಂಡು ಎಸ್.ಮೇಡಹಳ್ಳಿ ಜಮೀನಿನ ಕಡೆಗೆ ಸಂಶಯಾಸ್ಪದವಾಗಿ ಹೋಗುತ್ತಿದ್ದಾಗ ಆಸಾಮಿಯನ್ನು ಹಿಂಬಾಲಿಸಿ ತಡೆದು ನಿಲ್ಲಿಸಿ ಆತನ ಬಳಿ ಇದ್ದ ಚೀಲಗಳನ್ನು ಪರಿಶೀಲಿಸಲಾಗಿ, ಆತನ ಬಳಿ ಇದ್ದ ಎಲ್ಲಾ ಬ್ಯಾಗುಗಳಿಂದ ಒಟ್ಟು 29 ಮರದ ತುಂಡುಗಳು ದೊರೆತಿದ್ದು, ಸದರಿ ಬ್ಯಾಗುಗಳಲ್ಲಿದ್ದ ಮರದ ತುಂಡುಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ಅದರ ಸುವಾಸನೆ ಹಾಗೂ ಮರದ ಲಕ್ಷಣಗಳಿಂದ ಅದು ಶ್ರೀಗಂಧದ ಮರದ ತುಂಡುಗಳೆಂದು ಖಾತರಿಪಡಿಸಿಕೊಳ್ಳಲಾಗಿರುತ್ತದೆ. ಅವುಗಳ ತೂಕ ಒಟ್ಟು 25 ಕೆ.ಜಿ ಇರುತ್ತದೆ. ನಂತರ ಶ್ರೀಗಂಧವನ್ನು ಸಾಗಿಸಲು ಇಲಾಖೆಯ ರಹದಾರಿಯ ಬಗ್ಗೆ ಆಸಾಮಿಯನ್ನು ಕೇಳಲಾಗಿ, ತಮಿಳುನಾಡು ರಾಜ್ಯದ ತಿರುವಣ್ಣಾಮಲ್ಲೈ, ಮಾರಮ್ಮ ಕೋಯಿಲ್, ತೆರಿಯಾರ್ ವಾಸಿಯದ ಶ್ರೀ.ಆಂತೋನಿ ಎಂಬುವವರ ಮಗ ಮಣಿ ಎಂದೂ ಹಾಗೂ ಶ್ರೀಗಂಧವನ್ನು ಸಾಗಣೆ ಮಾಡಲು ತನ್ನ ಬಳಿ ಯಾವುದೇ ಸೂಕ್ತ ರಹದಾರಿ ಇಲ್ಲವೆಂದು ತಿಳಿಸಿರುತ್ತಾನೆ. ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಅಕ್ರಮವಾಗಿರುವುದರಿಂದ ಸದರಿ ಆರೋಪಿಯನ್ನು ಹಾಗೂ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಬಂಧಿಸಲಾದ ಆರೋಪಿಯನ್ನು ಗೌರವಾನ್ವಿತ ಜೆ.ಎಂ.ಎಫ್.ಸಿ ನ್ಯಾಯಾಲಯ, ಆನೇಕಲ್ ತಾಲ್ಲೂಕು ರವರ ಸಮಕ್ಷಮ ಹಾಜರುಪಡಿಸಿ, ನಂತರ ಆರೋಪಿಯನ್ನು ನ್ಯಾಯಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ತನಿಖೆಗಾಗಿ ಒಟ್ಟು 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 25 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದಂತೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಲಾಗಿ, ಆರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಆರೋಪಿಗೆ ಕಳುಹಿಸಲಾದ ಅಂಚೆ ಲಕೋಟೆಗಳು ಸ್ವೀಕೃತವಾಗದೆ ಹಿಂತಿರುಗಿ ಬಂದಿರುತ್ತದೆ. ಈ ಸಂಬಂಧ ದಿನಾಂಕ:09–01–2013ರಂದು 71ಎ ನಡವಳಿಯನ್ನು ನಡೆಸಲಾಗಿ, ಆರೋಪಿ ವಿಚಾರಣೆಗೆ ಗೈರು ಹಾಜರಾದ ಕಾರಣ, ಹಾಜರಿದ್ದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಆರ್.ಶಾಂತಕುಮಾರ ಸ್ವಾಮಿ ಬಿನ್ ಲೇಟ್.ಎಂ.ರಂಗಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಜಿ.ವಿ.ಮಳಗಿ ಬಿನ್ ವೀರಪ್ಪ ಮಳಗಿ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ರಾಮಚಂದ್ರ ಬಿನ್ ಪುಟ್ಟಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರ ಸಮಕ್ಷಮ ಪಡೆಯಲಾಗಿರುತ್ತದೆ. ಆರೋಪಿಯಾಗಲೀ ಅಥವಾ ಆತನ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಪಾಟಿ ಸವಾಲು ಇರುವುದಿಲ್ಲವೆಂದು ಪರಿಗಣಿಸಲಾಯಿತು.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಸಾಗಣೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸಾಗಣೆ ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:23–09–1993ರಂದು ಅತ್ತಿಬೆಲೆ–ಸರ್ಜಾಪುರ ರಸ್ತೆಯ ಎಸ್.ಮೇಡಹಳ್ಳಿ ಗ್ರಾಮದ ಬಸ್ ನಿಲುಗಡೆಯ ಹತ್ತಿರ ಎಸ್.ಮೇಡಹಳ್ಳಿ ಜಮೀನಿನ ಬಳಿ ಆರೋಪಿಯು ಅಕ್ರಮವಾಗಿ 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಬ್ಯಾಗುಗಳಲ್ಲಿ ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಯು ನೀಡಿರುವ ಹೇಳಿಕೆ ಪ್ರಕಾರ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸುತ್ತಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 25 ಕೆ.ಜಿ ಶ್ರೀಗಂಧದ ತುಂಡುಗಳು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 25 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:220/1993–94ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 25 ಕೆ.ಜಿ ತೂಕವುಳ್ಳ ಇಪ್ಪತ್ತೊಂಬತ್ತು (29) ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು **ಈ ಮೂಲಕ ಆದೇಶಿಸುತ್ತೇನೆ.**

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 11–07–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.2010**
**SC.10**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ:243/1993-94 ದಿನಾಂಕ:08/10/1993.**

**àNVÀH1.AA¿Ã.71A.243/93-94 º¼ñNPÀ11-07-2013.**

**E¿á¬Êô :** ಶ್ರೀ.ಎನ್.ಡಿ.ಸುದರ್ಶನ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ÀNïïñÌ º :** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

**ApÌ ¹ñÊÊô :** 1) ಶಾಮೇಂದ್ರ ಡಿ.ನಾಯ್ಕ್, ವ್ಯವಸ್ಥಾಪಕರು, ಮೆ॥ಚರಕ್ ಫಾರ್ಮಸಿಟಿಕಲ್ಸ್,

**BÊöóÀYçô :** 2) ಕೆ.ಡಿ.ಶಾರ್ಫ್, ಮ್ಯಾನೆಜಿಂಗ್ ಪಾರ್ಟ್‌ನರ್, ಮೆ॥ಚರಕ್ ಫಾರ್ಮಸಿಟಿಕಲ್ಸ್, ಬಾಂಬೆ.

**¿ÃPÊ§ದ ÔôôVñÃNÙYçôÀ**

1. ದಿನಾಂಕ:08–10–1993ರಂದು ಖಚಿತ ವರ್ತಮಾನದ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಸೋಮನಹಳ್ಳಿ ಕೈಗಾರಿಕಾ ಪ್ರದೇಶದ ಪ್ಲಾಟ್ ನಂ.18ರಲ್ಲಿದ್ದ ಮೆ॥ಚರಕ್ ಫಾರ್ಮಸಿಟಿಕಲ್ಸ್ ಕಂಪನಿಯ ಮಳಿಗೆ ಸಂಖ್ಯೆ:06 ಹಾಗೂ 07ರಲ್ಲಿ ಪರಿಶೀಲಿಸಲಾಗಿ, ಡ್ರಮ್‌ಗಳನ್ನು ದಾಸ್ತಾನು ಮಾಡಿದ್ದು, ಅವುಗಳ ಒಳಗೆ ಗೋಣಿಚೀಲದಲ್ಲಿ ಮರದ ಚಕ್ಕೆಗಳನ್ನು ತುಂಬಿರುವುದು ಕಂಡುಬಂದಿರುತ್ತದೆ. ಅವುಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ಅದರ ಸುವಾಸನೆ ಮತ್ತು ಗುಣಮಟ್ಟದಿಂದ ಶ್ರೀಗಂಧದ ಮರದ ಚಕ್ಕೆಗಳೆಂದು ಖಾತರಿಪಡಿಸಿಕೊಳ್ಳಲಾಗಿರುತ್ತದೆ. ಶ್ರೀಗಂಧದ ಮರದ ಚಕ್ಕೆಗಳನ್ನು ದಾಸ್ತಾನು ಮಾಡಲು ಇಲಾಖಾ ರಹದಾರಿಯನ್ನು ಒದಗಿಸುವಂತೆ ಸ್ಥಳದಲ್ಲಿದ್ದ ಸಹಾಯಕ ವ್ಯವಸ್ಥಾಪಕರಾದ ಶ್ರೀ.ಎಂ.ಎಸ್.ದೊರೆಸ್ವಾಮಿ ಹಾಗೂ ಅವರ ಸಿಬ್ಬಂದಿಯನ್ನು ಕೇಳಲಾಗಿ, ಸದರಿ ಕಂಪನಿಯ ವ್ಯವಸ್ಥಾಪಕರು ರಜೆಯ ಮೇಲೆ ತೆರಳಿರುವ ಕಾರಣ ದಾಖಲಾತಿಗಳನ್ನು ಒದಗಿಸಲು ನಾಲ್ಕು ದಿನಗಳ ಕಾಲಾವಕಾಶ ನೀಡುವಂತೆ ಕೇಳಿರುತ್ತಾರೆ. ದಾಸ್ತಾನು ಮಾಡಿದ್ದ ಶ್ರೀಗಂಧದ ಚಕ್ಕೆಯನ್ನು ತೂಕ ಮಾಡಲಾಗಿ ಎರಡು ಗೋಣಿಚೀಲಗಳಿಂದ ಒಟ್ಟು 74 ಕೆ.ಜಿ ಶ್ರೀಗಂಧವಿರುವುದು ಕಂಡುಬಂದಿರುತ್ತದೆ. ಶ್ರೀಗಂಧವನ್ನು ದಾಸ್ತಾನು ಮಾಡಲು ತಪಾಸಣಾ ಸಮಯದಲ್ಲಿ ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಲು ಸದರಿ ಕಂಪನಿಯವರು ವಿಫಲರಾಗಿರುತ್ತಾರೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ–84, 87, ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 154 ಉಲ್ಲಂಘನೆಯಾಗಿರುವ ಕಾರಣ, ಪಂಚನಾಮೆಯ ಸಹಿತ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಶಿವಣ್ಣ ಬಿನ್ ಲೇಟ್ ಶ್ರೀ.ಕೆ.ಮಾದಯ್ಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ) ಇವರ ಇವರ ಮುಖ್ಯ ವಿಚಾರಣೆಯನ್ನು ದಿನಾಂಕ:01–06–2002ರಲ್ಲಿ ಸರ್ಕಾರಿ ಅಭಿಯೋಜಕರ ಸಮಕ್ಷಮ ಪಡೆಯಲಾಗಿರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ನೀಡಿರುವ ಹೇಳಿಕೆಯನ್ನು ಪರಿಶೀಲಿಸಲಾಗಿ, ದಿನಾಂಕ:08–10–1993 ರಂದು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಸೋಮನಹಳ್ಳಿ ಕೈಗಾರಿಕಾ ಪ್ರದೇಶದ ಪ್ಲಾಟ್ ನಂ.18ರಲ್ಲಿನ ಮೆ॥ಚರಕ್ ಫಾರ್ಮಸಿಟಿಕಲ್ಸ್ ಕಂಪನಿಯ ಮಳಿಗೆ ಸಂಖ್ಯೆ:06 ಹಾಗೂ 07ರಲ್ಲಿನ ಡ್ರಮ್‌ಗಳಲ್ಲಿ ಗೋಣಿಚೀಲದಲ್ಲಿ ಶ್ರೀಗಂಧದ ಚಕ್ಕೆಯನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವುದು ರುಜುವಾತುಪಡಿಸಿಕೊಳ್ಳಲಾಗಿದೆ.

4. ಪ್ರಕರಣಕ್ಕೆ ಸಂಬಂಧಿಸಿದಂತೆ ದಿನಾಂಕ:20–06–2013ರಂದು ನಡೆದ 71ಎ ನ್ಯಾಯಾಲಯದ ನಡವಳಿಯಲ್ಲಿ ಮೆ॥ಚರಕ್ ಫಾರ್ಮ, ಬಾಂಬೆ ಇಲ್ಲಿನ ವ್ಯವಸ್ಥಾಪಕರಾದ ಶ್ರೀ.ಅತುಲ್ ಕುಲಕರ್ಣಿ ಇವರು ಹಾಜರಿದ್ದು, ಸದರಿಯವರನ್ನು ವಿಚಾರಣೆಗೆ ಒಳಪಡಿಸಲಾಗಿ, ಶ್ರೀಗಂಧದ ಚಕ್ಕೆಯನ್ನು ದಾಸ್ತಾನು ಮಾಡಿದ್ದ ಮೆ॥ಚರಕ್ ಫಾರ್ಮಸಿಟಿಕಲ್ಸ್, ಸೋಮನಹಳ್ಳಿ ಗ್ರಾಮ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಈ ಕಂಪನಿಯು 2000ನೇ ಇಸವಿಯಲ್ಲಿ ಸ್ಥಗಿತಗೊಳಿಸಿದ್ದು, ಸದರಿ ಜಾಗವನ್ನು ಬೇರೆಯವರಿಗೆ ಮಾರಾಟ ಮಾಡಿರುವುದರಿಂದ ಕರ್ನಾಟಕದಲ್ಲಿ ಈ ಹೆಸರಿನ ಯಾವುದೇ ಕಂಪನಿ ಇರುವುದಿಲ್ಲವೆಂದು ಹಾಗೂ ಪ್ರಕರಣಕ್ಕೆ ಸಂಬಂಧಿಸಿದಂತೆ ಜಪ್ತು ಮಾಡಿರುವ ಶ್ರೀಗಂಧಕ್ಕೂ ತಮಗೂ ಯಾವುದೇ ಸಂಬಂಧವಿಲ್ಲದ ಕಾರಣ ಪ್ರಕರಣವನ್ನು ವಜಾಗೊಳಿಸುವಂತೆ ಕೋರಿ ಹೇಳಿಕೆ ನೀಡಿರುತ್ತಾರೆ. ಅವರ ಹೇಳಿಕೆ ಸಂದರ್ಭದಲ್ಲಿ ಈ ಹಿಂದೆ ಸಂಸ್ಥೆ ನಡೆಯುತ್ತಿದ್ದ ಸಮಯದಲ್ಲಿ ಅಲ್ಲಿನ ವ್ಯವಸ್ಥಾಪಕರಾಗಿ ಸುರೆಂದ್ರ ಡಿ.ನಾಯ್ಕ್ ಇವರು ಕೆಲಸ ನಿರ್ವಹಿಸಿದ್ದು, ತದನಂತರ ಸಂಸ್ಥೆಯನ್ನು ಸ್ಥಗಿತಗೊಳಿಸಿದ ನಂತರ ಅವರ ಕೆಲಸ ಬಿಟ್ಟು ಹೋಗಿದ್ದು, ಅವರ ಹಾಲಿ ವಿಳಾಸ ಮತ್ತು ಕೆಲಸ ಮಾಡುತ್ತಿರುವ ಸ್ಥಳ ಯಾವುದೂ ಸಹ ತಮಗೆ ತಿಳಿದಿರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ. ಮೆ॥ಚರಕ್ ಫಾರ್ಮಸಿಟಿಕಲ್ಸ್ ಸಂಸ್ಥೆಯ ಹಿಂದಿನ ಮಾಲೀಕರಾದ ಶ್ರೀ.ಶಾರ್ಫ್ ರವರು ವಯೋ ವೃದ್ಧರಾಗಿದ್ದು, ಅವರು ಹೃದಯಕ್ಕೆ ಸಂಬಂಧಿಸಿದ ಕಾಯಿಲೆಯಿಂದ ಬಳಲುತ್ತಿದ್ದು, ಮುಂಬೈನಲ್ಲಿ ವಾಸಿಸುತ್ತಿರುವ ಕಾರಣ ಹಾಗೂ ಸದರಿ ವಿಚಾರಣೆಗೆ ಹಾಜರಾಗಲು ಸಾಧ್ಯವಾಗದ ಕಾರಣ ಅವರ ಪರವಾಗಿ ತಮ್ಮನ್ನು ನಿಯೋಜಿಸಿ ಕಳುಹಿಸಿದ್ದು, ಈ ಹಿಂದೆಯೇ ಮೆ॥ಚರಕ್ ಫಾರ್ಮಸಿಟಿಕಲ್ಸ್ ಸಂಸ್ಥೆಯನ್ನು ಸ್ಥಗಿತಗೊಳಿಸಿರುವ ಕಾರಣ, ಪ್ರಕರಣವನ್ನು ಮುಂದುವರಿಸದೇ ಕೈಬಿಡಲು ಕೋರಿ ಹೇಳಿಕೆ ನೀಡಿರುತ್ತಾರೆ.

5. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಅಕ್ರಮವಾಗಿ 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸಹಾಯಕ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸಹಾಯಕ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ. ಸದರಿಯವರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಯ ಪರವಾಗಿ ಶ್ರೀ.ಅತುಲ್ ಕುಲಕರ್ಣಿ, ಹಿರಿಯ ವ್ಯವಸ್ಥಾಪಕರು, ಮೆ॥ಚರಕ್ ಫಾರ್ಮ ಪ್ರೈವೇಟ್ ಲಿ., ಮುಂಬೈ ಇವರು ಹಾಜರಿದ್ದು, ಹೇಳಿಕೆ ನೀಡಿ ಈ ಹಿಂದೆಯೇ ಮೆ॥ಚರಕ್ ಫಾರ್ಮಾಸಿಟಿಕಲ್ಸ್, ಸೋಮನಹಳ್ಳಿಯ ಸಂಸ್ಥೆಯನ್ನು ಸ್ಥಗಿತಗೊಳಿಸಿರುವ ಕಾರಣ, ಪ್ರಕರಣವನ್ನು ಮುಂದುವರಿಸದೇ ಕೈಬಿಡಲು ಕೋರಿರುವುದರಿಂದ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:08–10–1993ರಂದು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಸೋಮನಹಳ್ಳಿ ಕೈಗಾರಿಕಾ ಪ್ರದೇಶದ ಪ್ಲಾಟ್ ನಂ.18ರಲ್ಲಿದ್ದ ಮೆ॥ಚರಕ್ ಫಾರ್ಮಸಿಟಿಕಲ್ಸ್ ಕಂಪನಿಯ ಮಳಿಗೆ ಸಂಖ್ಯೆ:06 ಹಾಗೂ 07ರಲ್ಲಿ ಡ್ರಮ್‌ಗಳ ಒಳಗೆ ಸೂಕ್ತ ರಹದಾರಿ ಇಲ್ಲದೇ 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ತುಂಬಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:243/1993–94ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 74 ಕೆ.ಜಿ ಶ್ರೀಗಂಧದ ಚಕ್ಕೆಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು **ಈ ಮೂಲಕ ಆದೇಶಿಸುತ್ತೇನೆ.**

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 11–07–2013ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

PR.2009
SC.10

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

**[ನಿಯಮ 8(1)ನ್ನು ನೋಡಿ]**

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಚಿಕ್ಕಬಳ್ಳಾಪುರ ನಗರಸಭೆ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ನಗರಸಭೆಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | **ಚುನಾವಣಾ ಚಟುವಟಿಕೆ** | **ದಿನಾಂಕ** |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013**

**ನಗರಸಭೆ, ಚಿಕ್ಕಬಳ್ಳಾಪುರ**

| ಕ್ರ. ಸಂ. | **ವಾರ್ಡಿನ ಸಂಖ್ಯೆ ಮತ್ತು ಹೆಸರು** | **ಸದಸ್ಯ ಸ್ಥಾನಗಳ ಸಂಖ್ಯೆ** | **ಮೀಸಲಾತಿ ಪ್ರವರ್ಗಗಳು** |
|---|---|---|---|
| **1** | 1–ವಾಪಸಂದ್ರ–1 | ಒಂದು | ಹಿಂದುಳಿದ ವರ್ಗ–ಬಿ |
| **2** | 2–ವಾಪಸಂದ್ರ–2 | ಒಂದು | ಸಾಮಾನ್ಯ |
| **3** | 3–ದರ್ಗಾಮೊಹಲ್ಲಾ | ಒಂದು | ಹಿಂದುಳಿದ ವರ್ಗ–ಎ (ಮಹಿಳೆ) |
| **4** | 4–ಪ್ರಶಾಂತನಗರ–1 | ಒಂದು | ಸಾಮಾನ್ಯ |
| **5** | 5–ಪ್ರಶಾಂತನಗರ–2 | ಒಂದು | ಸಾಮಾನ್ಯ |
| **6** | 6–ಎ.ಪಿ.ಎಂ.ಸಿ ಯಾರ್ಡ್ | ಒಂದು | ಪರಿಶಿಷ್ಟ ಜಾತಿ |
| **7** | 7–ನಿಮ್ಮಾಕಲಕುಂಟೆ | ಒಂದು | ಸಾಮಾನ್ಯ |
| **8** | 8–ವೇಣುಗೋಪಾಲಸ್ವಾಮಿ ದೇವಸ್ಥಾನ ಪ್ರದೇಶ | ಒಂದು | ಸಾಮಾನ್ಯ |
| **9** | 9–ಗಂಗಮ್ಮನಗುಡಿ ಪ್ರದೇಶ ಮತ್ತು ಟಿ.ಜಿ.ಟ್ಯಾಂಕ್ ಪ್ರದೇಶ | ಒಂದು | ಸಾಮಾನ್ಯ |
| **10** | 10–ಮಸೀದಿ ರಸ್ತೆ ಪ್ರದೇಶ ಮತ್ತು ನಗರಸಭೆ ಕಾರ್ಯಾಲಯದ ಪ್ರದೇಶ | ಒಂದು | ಹಿಂದುಳಿದ ವರ್ಗ–ಎ |
| **11** | 11–ಅಲ್ಲಾವ್ ಗುಡಿ ಪ್ರದೇಶ | ಒಂದು | ಹಿಂದುಳಿದ ವರ್ಗ–ಬಿ (ಮಹಿಳೆ) |
| **12** | 12–ಎ.ಡಿ.ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| **13** | 13–ಬಾಪೂಜಿ ನಗರ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| **14** | 14–ಕಂದವಾರ ನಂದಿ ರಸ್ತೆ, ಮುತ್ಯಾಲಮ್ಮ ದೇವಸ್ಥಾನ ರಸ್ತೆ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| **15** | 15– ಕಂದವಾರ ಪೇಟೆ | ಒಂದು | ಹಿಂದುಳಿದ ವರ್ಗ–ಎ |
| **16** | 16–ಬಸವನಗುಡಿ ರಸ್ತೆ ಮತ್ತು ಶಂಕರಮಠರಸ್ತೆ | ಒಂದು | ಸಾಮಾನ್ಯ (ಮಹಿಳೆ) |
| **17** | 17–ಅರೇಬಿಕ್ ಅಂಜುಮನ್ ಶಾಲೆ ಮತ್ತು ಕೋಟೆ ಪ್ರದೇಶ ನಾಯಕರ ಬೀದಿ | ಒಂದು | ಹಿಂದುಳಿದ ವರ್ಗ–ಎ |
| **18** | 18–ಎಸ್.ಆರ್.ಸಂದಿ, ಹಳೇ ಎ.ಇ.ಓ. ಆಫೀಸ್ ರಸ್ತೆ | ಒಂದು | ಸಾಮಾನ್ಯ |
| **19** | 19–ಬಸವನಗುಡಿ ಮತ್ತು ಧರ್ಮಛತ್ರ ಪ್ರದೇಶ | ಒಂದು | ಸಾಮಾನ್ಯ |
| **20** | 20–ಒಕ್ಕಲಿಗರ ಹಾಸ್ಟೆಲ್ ಪ್ರದೇಶ ಮತ್ತು ಕೌಸರ್‌ನಗರ ಪ್ರದೇಶ | ಒಂದು | ಹಿಂದುಳಿದ ವರ್ಗ–ಎ |
| **21** | 21–ನಕ್ಕಲಕುಂಟೆಯ ಪ್ರದೇಶ ಶಾಂತಿನಗರ ಸಂತೆ ಮಾರ್ಕೆಟ್ | ಒಂದು | ಹಿಂದುಳಿದ ವರ್ಗ–ಎ (ಮಹಿಳೆ) |
| **22** | 22–ಕೆಳಗಿನ ತೋಟಗಳು (ಹೆಚ್.ಎಸ್.ಗಾರ್ಡನ್) | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| **23** | 23–ಚಾಮರಾಜಪೇಟೆ | ಒಂದು | ಸಾಮಾನ್ಯ (ಮಹಿಳೆ) |

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 24 | 24–ಕಾರ್ಖಾನೆಪೇಟೆ, ಹೂವಿನ ದಾಸಪ್ಪನ ಬೀದಿ, ಕುವೆಂಪು ರಸ್ತೆ, ಗೌಡಗೆರೆ ಬೀದಿ, ಬಜಾರ್ ರಸ್ತೆ | ಒಂದು | ಸಾಮಾನ್ಯ (ಮಹಿಳೆ) |
| 25 | 25–ಡಿ.ವಿ.ಟಿ.ಪೇಟೆ ನರಸಿಂಹಸ್ವಾಮಿ ದೇವಸ್ಥಾನ, ಕನಕ ಭಜನೆ ಮನೆ ರಸ್ತೆ | ಒಂದು | ಸಾಮಾನ್ಯ |
| 26 | 26–ಪಾಂಡುರಂಗಸ್ವಾಮಿ ದೇವಾಲಯ ಐ.ಟಿ.ಐ.ರಸ್ತೆ ಹಳೇ ಸಂತೆಪೇಟೆ | ಒಂದು | ಹಿಂದುಳಿದ ವರ್ಗ–ಎ (ಮಹಿಳೆ) |
| 27 | 27–ಡಿ.ಬಿ.ಎಂ. ರಸ್ತೆ ಮತ್ತು ಗರಕರಾಳ್ಳ ಬೀದಿ ಪ್ರದೇಶ ಕುರುಬರ ಪೇಟೆ | ಒಂದು | ಸಾಮಾನ್ಯ (ಮಹಿಳೆ) |
| 28 | 28–ಕೊರಚರ ಪೇಟೆ ಮೂರ್ತಿ ನರ್ಸಿಂಗ್ ಹೋಂ | ಒಂದು | ಸಾಮಾನ್ಯ |
| 29 | 29–ಸುಣ್ಣ ಕಲ್ಲು ಬೀದಿ ಮತ್ತು ಕೆ.ಇ.ಬಿ ಕಛೇರಿ ಪ್ರದೇಶ | ಒಂದು | ಸಾಮಾನ್ಯ (ಮಹಿಳೆ) |
| 30 | 30–ಚಾಮರಾಜಪೇಟೆ ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| 31 | 31–ಬಡವರ ಸಂಘ ಮತ್ತು ಕೆ.ಇ.ಬಿ.ಕ್ವಾಟ್ರಸ್ ಪ್ರದೇಶ | ಒಂದು | ಹಿಂದುಳಿದ ವರ್ಗ–ಎ |

**ಡಾ॥ ಎನ್.ಮಂಜುಳ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ

PR.1986
SC.50

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

**[ನಿಯಮ 8(1)ನ್ನು ನೋಡಿ]**

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಚಿಂತಾಮಣಿ ನಗರಸಭೆ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ನಗರಸಭೆಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013**

**ನಗರಸಭೆ, ಚಿಂತಾಮಣಿ**

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 1. | 1–ವೆಂಕಟಗಿರಿ ಕೋಟೆ ಉತ್ತರ | ಒಂದು | ಸಾಮಾನ್ಯ |
| 2. | 2–ವೆಂಕಟಗಿರಿ ಕೋಟೆ ದಕ್ಷಿಣ | ಒಂದು | ಹಿಂ.ವ. (ಎ) |
| 3. | 3–ವೆಂಕಟಗಿರಿ ಕೋಟೆ ಕಾಲೋನಿ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| 4. | 4–ಟ್ಯಾಂಕ್ ಬಂಡ್ ರಸ್ತೆ ಪಶ್ಚಿಮ | ಒಂದು | ಹಿಂ.ವ. (ಎ) |

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 5. | 5–ಟ್ಯಾಂಕ್ ಬಂಡ್ ರಸ್ತೆ ಪೂರ್ವ | ಒಂದು | ಹಿಂ.ವ (ಬಿ) (ಮಹಿಳೆ) |
| 6. | 6–ಅಂಜನಿ ಬಡಾವಣೆ | ಒಂದು | ಸಾಮಾನ್ಯ (ಮಹಿಳೆ) |
| 7. | 7–ಅಶ್ವಿನಿ ಬಡಾವಣೆ | ಒಂದು | ಸಾಮಾನ್ಯ (ಮಹಿಳೆ) |
| 8. | 8–ಕನ್ನಂಪಲ್ಲಿ | ಒಂದು | ಸಾಮಾನ್ಯ (ಮಹಿಳೆ) |
| 9. | 9–ಮಾಳಪಲ್ಲಿ | ಒಂದು | ಸಾಮಾನ್ಯ |
| 10. | 10–ಎನ್.ಆರ್.ಬಡಾವಣೆ | ಒಂದು | ಹಿಂ.ವ. (ಎ) (ಮಹಿಳೆ) |
| 11. | 11–ವೆಂಕಟೇಶ್ವರ ಬಡಾವಣೆ | ಒಂದು | ಹಿಂ.ವ. (ಎ) |
| 12. | 12–ಕೆ.ಆರ್.ಬಡಾವಣೆ | ಒಂದು | ಸಾಮಾನ್ಯ |
| 13. | 13–ಸೊಣ್ಣಶೆಟ್ಟಿಹಳ್ಳಿ | ಒಂದು | ಪರಿಶಿಷ್ಟ ಜಾತಿ |
| 14. | 14–ತಪತೇಶ್ವರ ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| 15. | 15–ಟಿಪ್ಪುನಗರ | ಒಂದು | ಹಿಂ.ವ. (ಎ) |
| 16. | 16–ಗಾಂಧಿನಗರ | ಒಂದು | ಸಾಮಾನ್ಯ |
| 17. | 17–ಚೌಡರೆಡ್ಡಿ ಪಾಳ್ಯ | ಒಂದು | ಸಾಮಾನ್ಯ |
| 18. | 18–ಕೀರ್ತಿ ನಗರ | ಒಂದು | ಹಿಂ.ವ. (ಬಿ) |
| 19. | 19–ಬಂಬೂ ಬಜಾರ್ | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| 20. | 20–ಶ್ರೀರಾಮ ನಗರ | ಒಂದು | ಸಾಮಾನ್ಯ |
| 21. | 21–ಜೆ.ಜೆ.ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| 22. | 22–ಹೂವಿನ ಪೇಟೆ | ಒಂದು | ಸಾಮಾನ್ಯ (ಮಹಿಳೆ) |
| 23. | 23–ಹಳೇಪೇಟೆ | ಒಂದು | ಹಿಂ.ವ. (ಎ) |
| 24. | 24–ನಾರಸಿಂಹಪೇಟೆ | ಒಂದು | ಸಾಮಾನ್ಯ |
| 25. | 25–ಎನ್.ಎನ್.ಟಿ.ದಕ್ಷಿಣ | ಒಂದು | ಸಾಮಾನ್ಯ |
| 26. | 26–ಎನ್.ಎನ್.ಟಿ.ಉತ್ತರ | ಒಂದು | ಹಿಂ.ವ. (ಎ) (ಮಹಿಳೆ) |
| 27. | 27–ಶಾಂತಿನಗರ | ಒಂದು | ಸಾಮಾನ್ಯ |
| 28. | 28–ಮಹಬೂಬ್ ನಗರ | ಒಂದು | ಸಾಮಾನ್ಯ (ಮಹಿಳೆ) |
| 29. | 29–ನೆಕ್ಕುಂದಿ ಪೇಟೆ | ಒಂದು | ಸಾಮಾನ್ಯ |
| 30. | 30–ಪಟಾಲಮ್ಮ ದೇವಸ್ಥಾನ | ಒಂದು | ಹಿಂ.ವ. (ಎ) (ಮಹಿಳೆ) |
| 31. | 31–ತಿಮ್ಮಸಂದ್ರ | ಒಂದು | ಸಾಮಾನ್ಯ |

**PR.1987**
**SC.50**

**ಡಾ॥ ಎನ್.ಮಂಜುಳ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

[ನಿಯಮ 8(1)ನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಶಿಡ್ಲಘಟ್ಟ ಪುರಸಭೆ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ಪುರಸಭೆಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013**

**ಪುರಸಭೆ, ಶಿಡ್ಲಘಟ್ಟ**

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 1. | 1–ಸಿ.ಆರ್.ಲೇಔಟ್ | ಒಂದು | ಹಿಂ.ವ. (ಎ) |
| 2. | 2–ಬೋವಿ ಕಾಲೋನಿ | ಒಂದು | ಹಿಂ.ವ. (ಎ) |
| 3. | 3–ಕೆ.ಕೆ.ಪೇಟೆ | ಒಂದು | ಸಾಮಾನ್ಯ |
| 4. | 4–ಕೋಟೆ | ಒಂದು | ಹಿಂ.ವ. (ಎ) |
| 5. | 5–ಖಾಜಿ ರಸ್ತೆ | ಒಂದು | ಹಿಂ.ವ. (ಬಿ) |
| 6. | 6–ಕುರುಬರಪೇಟೆ | ಒಂದು | ಸಾಮಾನ್ಯ |
| 7. | 7–ಎ.ಕೆ.ಕಾಲೋನಿ | ಒಂದು | ಸಾಮಾನ್ಯ |
| 8. | 8–ಎ.ಕೆ.ಕಾಲೋನಿ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| 9. | 9–ಎ.ಕೆ.ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| 10. | 10–2ನೇ ನಗರ್ತರಪೇಟೆ | ಒಂದು | ಸಾಮಾನ್ಯ |
| 11. | 11–ದೇಶದ ಪೇಟೆ | ಒಂದು | ಸಾಮಾನ್ಯ (ಮಹಿಳೆ) |
| 12. | 12–ಗಾಂಧಿನಗರ | ಒಂದು | ಸಾಮಾನ್ಯ (ಮಹಿಳೆ) |
| 13. | 13–ಕೆನರಾ ಬ್ಯಾಂಕ್ ಮತ್ತು ಕೆಮ್ಮಣ್ಣು ಬಾಗಿಲು ಸರ್ಕಲ್ | ಒಂದು | ಹಿಂ.ವ. (ಬಿ) (ಮಹಿಳೆ) |
| 14. | 14–ಹೌಸಿಂಗ್ ಬೋರ್ಡ್ ಏರಿಯಾ ಮತ್ತು ನಿಸಾರ್‌ಪಾಳ್ಯ | ಒಂದು | ಸಾಮಾನ್ಯ (ಮಹಿಳೆ) |
| 15. | 15–ಗಾಂಧಿನಗರ | ಒಂದು | ಸಾಮಾನ್ಯ (ಮಹಿಳೆ) |
| 16. | 16–1ನೇ ಟಿಎಂಸಿ ಲೇಔಟ್ ನಾರಾಯಣಸ್ವಾಮಿ ಲೇಔಟ್ | ಒಂದು | ಸಾಮಾನ್ಯ |
| 17. | 17–3ನೇ ಕಾರ್ಮಿಕ ನಗರ | ಒಂದು | ಹಿಂ.ವ. (ಎ) (ಮಹಿಳೆ) |
| 18. | 18–2ನೇ ಟಿಎಂಸಿ ಲೇಔಟ್ | ಒಂದು | ಸಾಮಾನ್ಯ |
| 19. | 19–ಅಜಾದ್‌ನಗರ | ಒಂದು | ಸಾಮಾನ್ಯ |
| 20. | 20–ಮಹಬೂಬ್ ನಗರ | ಒಂದು | ಹಿಂ.ವ. (ಎ) |
| 21. | 21–ಕಾಮಾಟಿಗರ ಪೇಟೆ | ಒಂದು | ಸಾಮಾನ್ಯ (ಮಹಿಳೆ) |
| 22. | 22–ಉಲ್ಲೂರುಪೇಟೆ | ಒಂದು | ಸಾಮಾನ್ಯ |
| 23. | 23–ಜೋಗುಪೇಟೆ | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| 24. | 24–3ನೇ ಕಾರ್ಮಿಕ ನಗರ | ಒಂದು | ಸಾಮಾನ್ಯ |
| 25. | 25–ರಹಮತ್ ನಗರ | ಒಂದು | ಹಿಂ.ವ (ಎ) (ಮಹಿಳೆ) |
| 26. | 26–2ನೇ ಟಿಎಂಸಿ ಲೇಔಟ್ | ಒಂದು | ಹಿಂ.ವ (ಎ) (ಮಹಿಳೆ) |
| 27. | 27–ಮಹಬೂಬ್ ನಗರ | ಒಂದು | ಸಾಮಾನ್ಯ |

**ಡಾ॥ ಎನ್.ಮಂಜುಳ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ

**PR.1990**
**SC.50**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

[ನಿಯಮ 8(1)ನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಬಾಗೇಪಲ್ಲಿ ಪುರಸಭೆ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ಪುರಸಭೆಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ.ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013**

**ಪುರಸಭೆ, ಬಾಗೇಪಲ್ಲಿ**

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 1. | 1–ವಾಲ್ಮೀಕಿ ಕಾಲೋನಿ | ಒಂದು | ಪರಿಶಿಷ್ಟ ಜಾತಿ |
| 2. | 2–ಸ್ಟೇಡಿಯಂ ಕಾಲೋನಿ | ಒಂದು | ಸಾಮಾನ್ಯ (ಮಹಿಳೆ) |
| 3. | 3–ಬಿಸಿಎಂ ಹಾಸ್ಟಲ್ ಪ್ರದೇಶ | ಒಂದು | ಸಾಮಾನ್ಯ |
| 4. | 4–ರಾಘವೇಂದ್ರ ಥಿಯೇಟರ್ ಪ್ರದೇಶ | ಒಂದು | ಹಿಂ.ವ. (ಬಿ) |
| 5. | 5–ನ್ಯಾಷನಲ್ ಕಾಲೇಜ್ ಪ್ರದೇಶ | ಒಂದು | ಪರಿಶಿಷ್ಟ ಜಾತಿ |
| 6. | 6–ಲೇಬರ್ ಕಾಲೋನಿ | ಒಂದು | ಸಾಮಾನ್ಯ |
| 7. | 7–ವೆಂಕಟೇಶ್ವರ ಥಿಯೇಟರ್ ಪ್ರದೇಶ | ಒಂದು | ಸಾಮಾನ್ಯ (ಮಹಿಳೆ) |
| 8. | 8–ಕನ್ನಿಕಾ ಪರಮೇಶ್ವರಿ ದೇವಸ್ಥಾನದ ಪ್ರದೇಶ | ಒಂದು | ಹಿಂ.ವ. (ಎ) |
| 9. | 9–ಫಾರೂಕ್ ಮಸೀದಿ ಪ್ರದೇಶ | ಒಂದು | ಹಿಂ.ವ. (ಎ) |
| 10. | 10–ಪಿ.ಎಲ್.ಡಿ ಬ್ಯಾಂಕ್ ಪ್ರದೇಶ | ಒಂದು | ಹಿಂ.ವ. (ಎ) |
| 11. | 11–ನೂರಾನಿ ಮೊಹಲ್ಲಾ ಪ್ರದೇಶ | ಒಂದು | ಸಾಮಾನ್ಯ (ಮಹಿಳೆ) |
| 12. | 12–ಕಾಲೋನಿ ಸಮುದಾಯ ಭವನ ಪ್ರದೇಶ | ಒಂದು | ಪರಿಶಿಷ್ಟ ಜಾತಿ |
| 13. | 13–ಅಂಬೇಡ್ಕರ್ ನಗರ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| 14. | 14–ಹಳೇ ನೀರಿನ ಟ್ಯಾಂಕ್ ಪ್ರದೇಶ | ಒಂದು | ಹಿಂ.ವ. (ಎ) |
| 15. | 15–ಕುಂಬಾರಪೇಟೆ | ಒಂದು | ಸಾಮಾನ್ಯ |
| 16. | 16–ಸಂತೆ ಮೈದಾನ | ಒಂದು | ಸಾಮಾನ್ಯ |
| 17. | 17–ಕಂಚು ಕೋಟೆ | ಒಂದು | ಹಿಂ.ವ. (ಎ) (ಮಹಿಳೆ) |
| 18. | 18–ಹೊಸ ಗಂಗಮ್ಮಗುಡಿ ಪ್ರದೇಶ | ಒಂದು | ಹಿಂ.ವ. (ಎ) (ಮಹಿಳೆ) |

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 19. | 19–ದರ್ಗಾ ಪ್ರದೇಶ | ಒಂದು | ಸಾಮಾನ್ಯ |
| 20. | 20–ಅವುಲಮಂದೆ ಪ್ರದೇಶ | ಒಂದು | ಪರಿಶಿಷ್ಟ ಪಂಗಡ |
| 21. | 21–ಪುರಸಭೆ ಹಿಂಭಾಗದ ಕಾಲೋನಿ | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| 22. | 22– ಕೆಇಬಿ ಕಾಲೋನಿ | ಒಂದು | ಹಿಂ.ವ (ಬಿ) (ಮಹಿಳೆ) |
| 23. | 23–ರಾಘವೇಂದ್ರ ದೇವಸ್ಥಾನದ ಪ್ರದೇಶ | ಒಂದು | ಸಾಮಾನ್ಯ |

**ಡಾ॥ ಎನ್.ಮಂಜುಳ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ

**PR.1989**
**SC.50**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

[ನಿಯಮ 8(1)ನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಗೌರಿಬಿದನೂರು ಪುರಸಭೆ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ಪುರಸಭೆಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013**

**ಪುರಸಭೆ, ಗೌರಿಬಿದನೂರು**

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 1. | 1–ಕರೆಕಲ್ಲಹಳ್ಳಿ | ಒಂದು | ಪರಿಶಿಷ್ಟ ಜಾತಿ |
| 2. | 2–ವೀರಾಡಹಳ್ಳಿ | ಒಂದು | ಹಿಂದುಳಿದ ವರ್ಗ (ಬಿ) (ಮಹಿಳೆ) |
| 3. | 3–ನ್ಯಾಷನಲ್ ಕಾಲೇಜ್ ಏರಿಯಾ ಮತ್ತು ಕೋಟೆ ಪ್ರದೇಶ | ಒಂದು | ಹಿಂದುಳಿದ ವರ್ಗ (ಎ) |
| 4. | 4–ವಿವೇಕಾನಂದ ಕಾಲೋನಿ | ಒಂದು | ಸಾಮಾನ್ಯ |
| 5. | 5–ಬಜಾರ್ ರಸ್ತೆ | ಒಂದು | ಸಾಮಾನ್ಯ |
| 6. | 6–ಸಂತೇ ಮೈದಾನ | ಒಂದು | ಪರಿಶಿಷ್ಟ ಜಾತಿ |
| 7. | 7–ಟಿಪ್ಪು ನಗರ | ಒಂದು | ಹಿಂದುಳಿದ ವರ್ಗ (ಎ) |
| 8. | 8–ಕಾಕನತೋಪು | ಒಂದು | ಹಿಂದುಳಿದ ವರ್ಗ (ಎ) |

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 9. | 9–ಶಾನ್‌ಭೋಗದ ವೆಂಕಟರಮಣಪ್ಪ ಗಲ್ಲಿ | ಒಂದು | ಸಾಮಾನ್ಯ |
| 10. | 10–ಹೊವಾಡಿಗರ ಗಲ್ಲಿ | ಒಂದು | ಸಾಮಾನ್ಯ (ಮಹಿಳೆ) |
| 11. | 11–ಕೊಲಿಮಿ ಗಲ್ಲಿ ಮತ್ತು ರೈಲ್ವೆ ಸ್ಟೇಷನ್ ರಸ್ತೆ | ಒಂದು | ಹಿಂದುಳಿದ ವರ್ಗ–ಎ (ಮಹಿಳೆ) |
| 12. | 12–ತ್ಯಾಗರಾಜ ಕಾಲೋನಿ | ಒಂದು | ಸಾಮಾನ್ಯ |
| 13. | 13–ಆರ್.ಕೆ.ಕ್ಲಿನಿಕ್ ಬಲಭಾಗದ ಏರಿಯಾ | ಒಂದು | ಸಾಮಾನ್ಯ (ಮಹಿಳೆ) |
| 14. | 14–ವಿ.ವಿ.ಪುರಂ | ಒಂದು | ಹಿಂದುಳಿದ ವರ್ಗ–ಎ (ಮಹಿಳೆ) |
| 15. | 15–ಪರಗಿ ಹುಚ್ಚಪ್ಪನ ಗಲ್ಲಿ | ಒಂದು | ಸಾಮಾನ್ಯ |
| 16. | 16–ಮರಿಗಮ್ಮನ ದೇವಸ್ಥಾನದ ಪ್ರದೇಶ | ಒಂದು | ಸಾಮಾನ್ಯ (ಮಹಿಳೆ) |
| 17. | 17–ಸ್ಲಂ ಏರಿಯಾ | ಒಂದು | ಸಾಮಾನ್ಯ |
| 18. | 18–ನೆಹರೂಜಿ ಕಾಲೋನಿ | ಒಂದು | ಪರಿಶಿಷ್ಠ ಜಾತಿ (ಮಹಿಳೆ) |
| 19. | 19–ಶ್ರೀನಗರ | ಒಂದು | ಸಾಮಾನ್ಯ |
| 20. | 20–ಉಪ್ಪಾರ ಕಾಲೋನಿ | ಒಂದು | ಹಿಂದುಳಿದ ವರ್ಗ–ಬಿ |
| 21. | 21–ಅರವಿಂದನಗರ | ಒಂದು | ಹಿಂದುಳಿದ ವರ್ಗ–ಎ |
| 22. | 22–ಮಾದನಹಳ್ಳಿ | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| 23. | 23–ಆನಂದಪುರ | ಒಂದು | ಪರಿಶಿಷ್ಟ ಪಂಗಡ |

**ಡಾ॥ ಎನ್.ಮಂಜುಳ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ

**PR.1988**
**SC.50**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–1**

[ನಿಯಮ 8(1)ನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್(2)/ಸಿಆರ್19/2012–13ದಿನಾಂಕ: 16/02/2013**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಗುಡಿಬಂಡೆ ಪಟ್ಟಣ ಪಂಚಾಯತಿ** ಕೌನ್ಸಿಲರುಗಳ ಸ್ಥಾನಗಳನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ಪಟ್ಟಣ ಪಂಚಾಯತಿಯ ವಿವಿಧ ವಾರ್ಡ್‌ಗಳಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎನ್.ಮಂಜುಳ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 23.02.2013 ಶನಿವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25.02.2013 ಸೋಮವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27.02.2013 ಬುಧವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 07.03.2013 ಗುರುವಾರ |
| 5. | ಮತದಾನ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | |
| 6. | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | 09.03.2013 ಶನಿವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.03.2013 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 11.03.2013 ಸೋಮವಾರ |

ಪ್ರಪತ್ರ 1ರ ಅನುಬಂಧ

ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲರುಗಳ ಸ್ಥಾನಗಳಿಗಾಗಿ ಸಾರ್ವತ್ರಿಕ ಚುನಾವಣೆ–2013

ಪಟ್ಟಣ ಪಂಚಾಯಿತಿ, ಗುಡಿಬಂಡೆ

| ಕ್ರ. ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗಗಳು |
|---|---|---|---|
| 1. | 1–ಇಂದಿರಾನಗರ ಮತ್ತು ಹೌಸಿಂಗ್ ಬೋರ್ಡ್ ಕಾಲೋನಿ | ಒಂದು | ಸಾಮಾನ್ಯ |
| 2. | 2–ಸೊಪ್ಪಿನಪೇಟೆ | ಒಂದು | ಸಾಮಾನ್ಯ (ಮಹಿಳೆ) |
| 3. | 3–ಬೆಟ್ಟದ ಕೆಳಗಿನ ಪೇಟೆ | ಒಂದು | ಪರಿಶಿಷ್ಟ ಜಾತಿ (ಮಹಿಳೆ) |
| 4. | 4–ಕೋಟೆ | ಒಂದು | ಸಾಮಾನ್ಯ |
| 5. | 5–ಅಂಬೇಡ್ಕರ್ ನಗರ | ಒಂದು | ಪರಿಶಿಷ್ಟ ಪಂಗಡ |
| 6. | 6–ನಾಯಕರ ಕಾಲೋನಿ | ಒಂದು | ಪರಿಶಿಷ್ಟ ಪಂಗಡ (ಮಹಿಳೆ) |
| 7. | 7–ಖಾಜಿ ಪೇಟೆ | ಒಂದು | ಹಿಂ.ವ. (ಎ) |
| 8. | 8–ಕುಂಬಾರಪೇಟೆ | ಒಂದು | ಹಿಂ.ವ. (ಬಿ) (ಮಹಿಳೆ) |
| 9. | 9–ಬಾಪೂಜಿನಗರ | ಒಂದು | ಹಿಂ.ವ. (ಎ) (ಮಹಿಳೆ) |
| 10. | 10–ಬಾಪೂಜಿನಗರ | ಒಂದು | ಹಿಂ.ವ. (ಎ) |
| 11. | 11–ಕಾಟನ್‌ಪೇಟೆ | ಒಂದು | ಸಾಮಾನ್ಯ |

**PR.1991** **ಡಾ॥ ಎನ್.ಮಂಜುಳ, ಭಾ.ಆ.ಸೇ**

**SC.50** ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ

## IN THE COURT OF CHIEF METROPOLITAN MAGISTRATE BANGALORE CITY

It is hereby notified to the public that the Banaswadi police Station, have seized the following vehicles and such vehicles are lying in the police station as unclaimed so far. Hence the owners of the vehicles and may put their claim one month from the date of this publication.

Bangalore City

Dated:

**Chief metropolitan**

**Magistrate Court, Bangalore City**

**List of the seized vehicles are lying in Banaswadi Police Station, Bangalore City which have been seized under C'mise/crime Numbers**

| SL.NO | CR.NO AND SEC OF LAW | PF NO | SEIZED VEHICLE |
|---|---|---|---|
| 1 | 227/10<br>379 IPC | 67/10 | HONDA ACTIVA BROWN , REG NO- KA-03 EZ-4226<br>CH-JFO8E8863508 , ENG-ME4JFO82178604 |
| 2 | 227/10<br>379 IPC | 68/10 | HONDA DIO -REG NO- KA-03 EY-3361 BLACK<br>CH-ME4J112678031839, ENG-J711E6039191 |
| 3 | 108/11<br>379 IPC | 55/11 | BLACK ,BAJAJ PULSAR BIKE REG NO-KA-04 EJ-1025<br>CHASIS NO-D1DHZZPCA 77700, ENG NO-DHGB1A15229 |
| 4 | 108/11<br>379 IPC | 55/11 | HONDA UNICORN BROWN , REG NO- KA-03 EX-2200<br>CHASIS NO-ME4KC092J680, ENG NO-KC09E9055101 |
| 5 | 108/11<br>379 IPC | 55/11 | RED COLOUR TVS VICTOR, REG NO-KA-17 V-4946<br>CHASIS NO-MD625AF1662C7, ENG NO-6F1C61510986 |
| 6 | 108/11<br>379 IPC | 58/11 | TVS SCOOTY ES REG NO-KA-04 U-4980,<br>CHASIS NO-K98AF16330, ENG NO-K98AAM164888 |
| 7 | 108/11<br>379 IPC | 58/11 | BLACK YAMAHA RX-100 . REG NO- KA-05 V-9895<br>CHASIS NO-97E1LS107043, ENG NO-1L5107043 |
| 8 | 108/11<br>379 IPC | 58/11 | BLACK HONDA UNICORN , REG NO-KA-04 EM-8436<br>CHASIS NO-MC4KL094J88080029, ENG NO-K009E1LS107043 |

**Chief metropolitan**

**PR.2014** **Magistrate Court, Bangalore City**

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005**

**ಅಧ್ಯಾಯ 4(1) (ಬಿ)**

**ಕೈಪಿಡಿ**

**2012–13**

**4(1)(ಬಿ)**

**(i) ರಚನೆ ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಯಾಗಿದ್ದು, ಇದು ವಿಕಾಸಸೌಧದ ನೆಲಮಹಡಿಯಲ್ಲಿ ಕೊಠಡಿಗಳ ಸಂಖ್ಯೆ: 29,30,31,32,34 ಮತ್ತು 19ರಲ್ಲಿ ನೆಲೆಗೊಂಡಿದೆ. ಸಾರ್ವಜನಿಕರು ಈ ಇಲಾಖೆಯ ಅಧಿಕಾರಿಗಳನ್ನು ಯಾವುದೇ ಕೆಲಸದ ದಿನದಂದು ಮಧ್ಯಾಹ್ನ 3.30 ಘಂಟೆಯಿಂದ 5.30 ಘಂಟೆಯವರೆಗೆ ನೇರವಾಗಿ ಸಂಪರ್ಕಿಸಬಹುದು.

ಇಲಾಖೆಯ ಸಂಸ್ಥಾಪಟವನ್ನು (Organisation Chart) ಈ ಕೆಳಗೆ ಕೊಡಲಾಗಿದೆ:

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ**

!

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು**

।

**ಸರ್ಕಾರದ ಕಾರ್ಯದರ್ಶಿಗಳು**

।

**ಸರ್ಕಾರದ ಉಪ ಕಾರ್ಯದರ್ಶಿ**

।

**ಸರ್ಕಾರದ ಅಧೀನ ಕಾರ್ಯದರ್ಶಿ(ಆಹಾರ–1&2) ಪೀಠಾಧಿಕಾರಿ, (ಆಹಾರ–1)**

!

**ಶೀಘ್ರಲಿಪಿಗಾರರು**

।

ಹಿರಿಯ ಸಹಾಯಕರು,

।

**ಶಾಖಾಧಿಕಾರಿ (ಆಹಾರ–2)**

।

ಸಹಾಯಕರು – ಕಿರಿಯ ಸಹಾಯಕರು

ಹಿರಿಯ ಸಹಾಯಕರು – ಕಿರಿಯ ಸಹಾಯಕರು – ಬೆರಳಚ್ಚುಗಾರರು – ಗ್ರೂಪ್–ಡಿ

ಬೆರಳಚ್ಚುಗಾರರು– ಗ್ರೂಪ್ ಡಿ.

।,

**ಪೀಠಾಧಿಕಾರಿ, (ಆಹಾರ–3)**

**ಸರ್ಕಾರದ ಆಧೀನ ಕಾರ್ಯದರ್ಶಿ (ಸಮನ್ವಯ)**

!

ಹಿರಿಯ ಸಹಾಯಕರು

**ಶಾಖಾಧಿಕಾರಿ(ಸ್ವೀಕೃತಿ ಮತ್ತು ರವಾನೆ)**

।

ಕಿರಿಯ ಸಹಾಯಕರು,

ಸಹಾಯಕರು – ಕಿರಿಯ ಸಹಾಯಕರು – ಬೆರಳಚ್ಚುಗಾರರು,

ಗ್ರೂಪ್ ಡಿ – ಗ್ರೂಪ್–ಡಿ

**(ii) ಅಧಿಕಾರಿಗಳ ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು:**

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ(ಸಚಿವಾಲಯದ) ವಿವಿಧ ಹಂತದ ಅಧಿಕಾರಿಗಳು, ಅವರ ಜವಾಬ್ದಾರಿಗಳು ಈ ಕೆಳಗಿನಂತಿದೆ.**

**I ಸರ್ಕಾರದ ಕಾರ್ಯದರ್ಶಿಗಳು**

ಇವರು ಇಲಾಖೆಯ ಅಧಿಕೃತ ಮುಖ್ಯಸ್ಥರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕಾನೂನು ಮಾಪನಶಾಸ್ತ್ರ ಇಲಾಖೆ, ಕರ್ನಾಟಕ ಅಹಾರ ಮತ್ತು ನಾಗರಿಕ ಸರಬರಾಜು ನಿಗಮ ಮತ್ತು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದಂತೆ ವ್ಯವಹಾರ ನಿಯಮಗಳಿಗೆ ಒಳಪಟ್ಟು ಮತ್ತು ಇಲಾಖೆಯ ಸಚಿವರ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳನ್ವಯ ಎಲ್ಲಾ ವ್ಯವಹಾರಗಳ ಮೇಲ್ವಿಚಾರಣೆ ಯನ್ನು ನಿರ್ವಹಿಸುತ್ತಾರೆ. ಅಲ್ಲದೆ, ತನ್ನ ಅಧೀನದಲ್ಲಿನ ಅಧಿಕಾರಿ/ಸಿಬ್ಬಂದಿಯು ಅವರಿಗೆ ವಹಿಸಿದ ಕೆಲಸವನ್ನು ಸಮರ್ಥವಾಗಿ ಮತ್ತು ತ್ವರಿತವಾಗಿ ನಿರ್ವಹಿಸುವುದರ ಮೇಲ್ವಿಚಾರಣೆ ಸಹ ನೋಡುತ್ತಾರೆ.

**II ಸರ್ಕಾರದ ಉಪ ಕಾರ್ಯದರ್ಶಿ**

ಇವರು ಇಲಾಖೆಗೆ ಸಂಬಂಧಿಸಿದ ಎಲ್ಲಾ ಪ್ರಕರಣಗಳ ವಿಲೇವಾರಿ ಹಾಗೂ ಪ್ರಮುಖ ವಿಷಯಗಳ ಮೇಲಿನ ಕ್ರಮದಬಗ್ಗೆ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರಸ್ತಾವನೆಗಳನ್ನು ಮಂಡಿಸುವುದು ಹಾಗೂ ಇಲಾಖೆಯಲ್ಲಿ ಸಂಘಟನೆ ಮತ್ತು ವಿಧಾನಗಳ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಾರೆ.

**III ಅಧೀನ ಕಾರ್ಯದರ್ಶಿ (ಆಹಾರ–1 ಮತ್ತು 2)**

ಇವರು ಆಹಾರ–1 ಮತ್ತು ಆಹಾರ–2 ಶಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ ವಿಷಯಗಳನ್ನು ನಿರ್ವಹಿಸುತ್ತಾರೆ:

1) ಆಹಾರ ಮತ್ತು ಪೆಟ್ರೋಲಿಯಂ ಉತ್ಪನ್ನಗಳ (LPG, Kerosene, Petrol Diesel) ಬಗೆಗಿನ ವಿಷಯಗಳು.

2) ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮಕ್ಕೆ ಸಂಬಂಧಿಸಿದಂತೆ Arbitration cases,Nomination of Directors and Writ Petitions and Service matters.

3) ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಆಹಾರ ಧಾನ್ಯಗಳ ವಿತರಣೆ ವಿಷಯಗಳು

4) ಸಕ್ಕರೆ/ಸೀಮೆಎಣ್ಣೆ ಹಂಚಿಕೆ ಹಾಗೂ ಲಾಭಾಂಶದ ಬಗೆಗಿನ ವಿಷಯಗಳು

5) ಸಾವಿಪ ಅಡಿಯಲ್ಲಿ ಬರುವ ದೂರುಗಳು.

6) ನ್ಯಾಯಬೆಲೆ ಅಂಗಡಿಗಳನ್ನು ಲಾಭದತ್ತ ನಡೆಸಲು ತೆಗೆದುಕೊಳ್ಳಬಹುದಾದ ವಿಷಯಗಳ ಕುರಿತು

7) ನಾರಿನಿಕೇತನಗಳು/ಇತರೇ ಕಲ್ಯಾಣ ಸಂಸ್ಥೆಗಳಿಗೆ ಕೇಂದ್ರ ಸರ್ಕಾರವು ಹಂಚಿಕೆ ಮಾಡಿದ ಆಹಾರಧಾನ್ಯಗಳ ವಿತರಣೆ/ಉಪಯೋಗಿತಾ ಪತ್ರಗಳನ್ನು ಕ್ರೋಢೀಕೃತಗೊಳಿಸುವುದು.

8) ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಂಬಂಧದ ಪ್ರಸ್ತಾವನೆಗಳು ಹಾಗೂ ಹೆಚ್ಚುವರಿ ಅನುದಾನದ ಪ್ರಸ್ತಾವಗಳು

9) Condomಗಳನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಾಟ ಮಾಡುವ ಹಾಗೂ ತತ್ಸಂಬಂಧ ಪ್ರಸ್ತಾವನೆಗಳು

10) ಸಾವಿಪ ಅಡಿಯಲ್ಲಿ ಆಹಾರಧಾನ್ಯಗಳ ವಿತರಣೆಯಲ್ಲಿ ಬೇಕಾಗಬಹುದಾದ ಹೆಚ್ಚುವರಿ ಅನುದಾನದ ಪ್ರಸ್ತಾವಗಳು.

11) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಸಚಿವರ ನ್ಯಾಯಾಲಯದಲ್ಲಿ ಸಲ್ಲಿಸುವ ಮೇಲ್ಮನವಿಗಳ ಅರ್ಜಿಗಳು

12) ಸಾವಿಪ ಅಡಿಯಲ್ಲಿ ಆಹಾರಧಾನ್ಯಗಳ ಕೊರತೆಯ ಹಣವನ್ನು ಮನ್ನಾ ಮಾಡುವ ವಿಷಯಗಳು

13) ಅಕ್ಷರ ದಾಸೋಹ/SGRY/(SC) ಆಹಾರಧಾನ್ಯಗಳ ವಿತರಣೆ/ಸಾಗಾಣಿಕೆ ವೆಚ್ಚ ಹಾಗೂ ಸೇವಾ ವೆಚ್ಚ ಹಾಗೂ ಸಂಬಂಧಿಸಿದ ಇತರೇ ಪ್ರಸ್ತಾವನೆಗಳು

14) ರೇಕ್ ಮೂವ್‌ಮೆಂಟ್ ಪ್ಲಾನ್.

15) ಗೋದಾಮು ಬಗೆಗಿನ ಪ್ರಸ್ತಾವನೆಗಳು

16) RBIಗೆ ಕಳುಹಿಸಬೇಕಾದ ಆಹಾರಧಾನ್ಯಗಳ ಸಂಗ್ರಹಣೆ ವಿಷಯಗಳು (Stock Statement)

17) ಸಾವಿಪ ಅಡಿಯಲ್ಲಿ Cash Credit facility ಪ್ರಸ್ತಾವನೆಗಳು

18) ಅಗತ್ಯ ವಸ್ತುಗಳ ಕಾಯ್ದೆಯಡಿಯಲ್ಲಿಯ ಎಲ್ಲಾ ವಿಷಯಗಳು

19) ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಆಹಾರಧಾನ್ಯಗಳ ಸಂಗ್ರಹಣೆ ಮತ್ತು ವಿಲೇವಾರಿ/ಹಣ ಬಿಡುಗಡೆ ವಿಷಯಗಳು (ಆವರ್ತಕ ನಿಧಿಯಿಂದ)

20) ಲೆವಿ ಸಕ್ಕರೆಯ ಸಗಟು ಮತ್ತು ಚಿಲ್ಲರೆ ಲಾಭಾಂಶಗಳ ವ್ಯತ್ಯಾಸದ ದರ ಪರಿಷ್ಕರಿಸುವ ಬಗೆಗಿನ ಪ್ರಸ್ತಾವನೆಗಳು

21) ಸಾವಿಪ ಅಡಿ ಆಹಾರಧಾನ್ಯಗಳ ಸಾಗಾಣಿಕೆ ಸಂಬಂಧದಲ್ಲಿನ ಟೆಂಡರ್ ಪ್ರಕ್ರಿಯೆಯ ಪ್ರಸ್ತಾವನೆಗಳು ಸಾರ್ವಜನಿಕ/KFCSC/TAPCMS ಹಾಗೂ ಈ ವಿಷಯಕ್ಕೆ ಸಂಬಂಧಿಸಿದ ರಿಟ್ ಅರ್ಜಿಗಳು

22) ನ್ಯಾಯಬೆಲೆ ಅಂಗಡಿಗಳಿಗೆ ಸರಬರಾಜು ಮಾಡುತ್ತಿರುವ ಅಯೋಡಿನ್‌ಯುಕ್ತ ಉಪ್ಪು ಬಳಕೆ ಬಗೆಗಿನ ಪ್ರಸ್ತಾವನೆಗಳು

23) ಕೇಂದ್ರ ಸರ್ಕಾರದ ಅನುದಾನದಡಿ ಸಂಚಾರಿ ವಾಹನಗಳನ್ನು ಖರೀದಿಸುವ ಪ್ರಸ್ತಾವನೆಗಳು

24) ಖಾದ್ಯ ತೈಲದ ಬಗೆಗಿನ ಪ್ರಸ್ತಾವನೆ

25) ವಿಧಾನಸಭೆ ಮತ್ತು ವಿಧಾನ ಪರಿಷತ್ತು ಅಧಿವೇಶನ ಸಮಯದಲ್ಲಿ ಮೇಲ್ಕಂಡ ವಿಷಯಗಳ ಮೇಲೆ ಬರುವ ಪ್ರಶ್ನೆಗಳ ನಿರ್ವಹಣೆ. ಹಾಗೂ ಲೋಕಸಭಾ ಮತ್ತು ರಾಜ್ಯಸಭಾ ಪ್ರಶ್ನೆಗಳಿಗೆ ಉತ್ತರಿಸುವುದು.

26) ತುರ್ತು ಸಂದರ್ಭದಲ್ಲಿ ಮೇಲಾಧಿಕಾರಿಗಳು ಸೂಚಿಸುವ ಯಾವುದೇ ವಿಷಯಗಳ ನಿರ್ವಹಣೆ.

**III ಪೀಠಾಧಿಕಾರಿ, ಆಹಾರ–1 ಶಾಖೆ:**

1) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದ ಎಲ್ಲಾ ಸೇವಾ ವಿಷಯಗಳು.

2) ಕಾನೂನು ಮಾಪನಶಾಸ್ತ್ರ ಇಲಾಖೆಗೆ ಸಂಬಂಧಿಸಿದ ಎಲ್ಲಾ ಸೇವಾ ವಿಷಯಗಳು.

3) ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಾಗುವ ಸೇವಾ ವಿಷಯಕ್ಕೆ ಸಂಬಂಧಿಸಿದ ರಿಟ್ ಪ್ರಕರಣಗಳು.

4) ಸೇವಾ ವಿಷಯಕ್ಕೆ ಸಂಬಂಧಿಸಿದಂತೆ ವಿಧಾನ ಸಭೆ/ಪರಿಷತ್ತು ಪ್ರಶ್ನೆಗಳಿಗೆ ಉತ್ತರಿಸುವುದು.

5) ತುರ್ತು ಸಂದರ್ಭದಲ್ಲಿ ಮೇಲಾಧಿಕಾರಿಗಳು ಸೂಚಿಸುವ ಯಾವುದೇ ವಿಷಯಗಳ ನಿರ್ವಹಣೆ.

**I V . ಅಧೀನ ಕಾರ್ಯದರ್ಶಿ (ಆಹಾರ–3 ಮತ್ತು ಸಮನ್ವಯ):**

ಇವರ ವ್ಯಾಪ್ತಿಗೆ ಸಮನ್ವಯ ಹಾಗೂ ಪತ್ರ ಸ್ವೀಕಾರ ಮತ್ತು ರವಾನೆ ಶಾಖೆ ಒಳಪಡುತ್ತದೆ. ಈ ಶಾಖೆಯಲ್ಲಿ ನಿರ್ವಹಿಸುವ ವಿಷಯಗಳು ಈ ಕೆಳಕಂಡಂತಿರುತ್ತವೆ:

**ಸಮನ್ವಯ:**

1) ಸೇವಾ ವಿಷಯ ಹೊರತುಪಡಿಸಿ ಇಲಾಖಾ ಮುಖ್ಯಸ್ಥರಿಂದ ಸ್ವೀಕರಿಸುವ ಎಲ್ಲಾ ರೀತಿಯ ಸಮನ್ವಯ ವಿಷಯಗಳ ನಿರ್ವಹಣೆ

2) ಮಹಾಲೇಖಪಾಲರ ಆಡಿಟ್ ಪ್ಯಾರಗಳಿಗೆ ಸಂಬಂಧಿಸಿದ ವಿಷಯಗಳು

3) ಗ್ರಾಹಕರ ಚಟುವಟಿಕೆಗಳನ್ನು ನಡೆಸುವ ಸಂಬಂಧ ಸ್ವೀಕರಿಸುವ ಪ್ರಸ್ತಾವನೆಗಳ ಮೇಲೆ ಕ್ರಮ ವಹಿಸುವುದು

4) ಕಾನೂನು ಮಾಪನಶಾಸ್ತ್ರ ಇಲಾಖೆಗೆ ಯೋಜನೆಯಡಿಯಲ್ಲಿ ಹಣ ಬಿಡುಗಡೆ ಮಾಡುವುದು

5) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಂಪೂರ್ಣ ಗಣಕೀಕರಣದ ಬಗ್ಗೆ.

6) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕಾನೂನು ಮಾಪನಶಾಸ್ತ್ರ ಇಲಾಖೆ ಮತ್ತು ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ಮತ್ತು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದ ವಿಷಯಗಳನ್ನು ಸಮನ್ವಯ –ಗೊಳಿಸುವ ಕಾರ್ಯವನ್ನು ನಿರ್ವಹಿಸುವುದು.

7) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದಂತೆ ನಡೆಯುವ ಎಂಎಂಆರ್, ಕಡತ ವಿಲೇವಾರಿ, ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳ ಸಭೆ ಮತ್ತು KDP ಸಭೆ,ಅಡ್–ಹಾಕ್ ಸಮಿತಿ ಸಭೆ ಮತ್ತು ಸಿಬ್ಬಂದಿ ಸಭೆ ಕುರಿತ ಸಂಯೋಜನಾ ಕ್ರಮ ಹಾಗೂ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದಂತೆ ವಾರ್ಷಿಕ ವರದಿ ತಯಾರಿಸುವುದು.

8) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗುವ ರಿಟ್ ಪ್ರಕರಣಗಳ ನಿರ್ವಹಣೆ.

9) ಅಧೀನ ಕಾರ್ಯದರ್ಶಿ (ಸಮನ್ವಯ), ಇವರು ಸ್ವೀಕೃತಿ ಮತ್ತು ರವಾನೆ ಶಾಖೆಯ ದೈನಂದಿನ ಕಾರ್ಯನಿರ್ವಹಣೆಯ ಮೇಲುಸ್ತುವಾರಿ.

10) ವಿ.ಸಭೆ/ಪರಿಷತ್ತು ಅಧಿವೇಶನ ಸಮಯದಲ್ಲಿ ಇಲಾಖೆಗೆ ಬರುವ ಪ್ರಶ್ನೆಗಳ ಕ್ರೋಢೀಕರಿಸುವುದು.

11) ತುರ್ತು ಸಂದರ್ಭದಲ್ಲಿ ಮೇಲಾಧಿಕಾರಿಗಳು ಸೂಚಿಸುವ ಯಾವುದೇ ವಿಷಯಗಳ ನಿರ್ವಹಣೆ.

**V ಪೀಠಾಧಿಕಾರಿ, ಆಹಾರ–3 ಶಾಖೆ:**

ಇವರು ಈ ಕೆಳಕಂಡ ವಿಷಯಗಳನ್ನು ನಿರ್ವಹಿಸುವರು:

1) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದ ಸೇವಾ ವಿಷಯಗಳು

2) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಅಧ್ಯಕ್ಷರು ಹಾಗೂ ಸದಸ್ಯರ ನೇಮಕಾತಿ ವಿಷಯ

3) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದಂತೆ ಅಯವ್ಯಯ ಬಿಡುಗಡೆ ಬಗ್ಗೆ.

4) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳಿಗೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿಗಳ ವಿಲೇವಾರಿ ಬಗ್ಗೆ

5) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆ ಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕರಿಂದ ಸ್ವೀಕರಿಸಿದ ದೂರುಗಳ ವಿಲೇವಾರಿ

6) ವಿ.ಸಭೆ/ಪರಿಷತ್ತು ಅಧಿವೇಶನ ಸಮಯದಲ್ಲಿ ಮೇಲ್ಕಂಡ ವಿಷಯಗಳ ಮೇಲೆ ಬರುವ ಪ್ರಶ್ನೆಗಳ ನಿರ್ವಹಣೆ

7) ಕೇಂದ್ರ ಸರ್ಕಾರದಿಂದ ಗ್ರಾಹಕರ ಹಕ್ಕುಗಳ ಸಂರಕ್ಷಣೆ ಬಗ್ಗೆ ಬರುವ ಸೂಚನೆಗಳಿಗೆ ಕ್ರಮ ವಹಿಸುವುದು.

8) ತುರ್ತು ಸಂದರ್ಭದಲ್ಲಿ ಮೇಲಾಧಿಕಾರಿಗಳು ಸೂಚಿಸುವ ಯಾವುದೇ ವಿಷಯಗಳ ನಿರ್ವಹಣೆ.

**VI ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ ಶಾಖೆ:**

ಇವರು ಈ ಕೆಳಕಂಡ ವಿಷಯಗಳನ್ನು ನಿರ್ವಹಿಸುತ್ತಾರೆ:

1) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ ಸಂಬಂಧಿಸಿದಂತೆ ಹೊರಗಿನಿಂದ ಟಪಾಲುಗಳನ್ನು ಸ್ವೀಕರಿಸಿ, ಈ ಟಪಾಲುಗಳನ್ನು ವರ್ಗೀಕರಿಸಿ ಗಣಕ ಯಂತ್ರದಲ್ಲಿ ನಮೂದಿಸಿ ಅವುಗಳನ್ನು ಸಂಬಂಧಿಸಿದ ಶಾಖೆಗಳಿಗೆ ಕಳುಹಿಸುವುದು ಹಾಗೂ ಶಾಖೆಗಳಿಂದ ಸ್ವೀಕರಿಸಿದ ಪತ್ರಗಳನ್ನು ಹೊರಗಿನ ವಿವಿಧ ಇಲಾಖೆಗಳಿಗೆ ರವಾನಿಸುವುದು.

2) ಮುದ್ರಣ ಮತ್ತು ಲೇಖನ ಸಾಮಗ್ರಿ ಇಲಾಖೆಯಿಂದ ಲೇಖನ ಸಾಮಗ್ರಿಗಳನ್ನು ಪಡೆದು ಇಲಾಖೆಯ ಎಲ್ಲಾ ಶಾಖೆಗಳಿಗೆ ವಿತರಿಸುವುದು

3) ಜೆರಾಕ್ಸ್ ಯಂತ್ರ ನಿರ್ವಹಣೆ.

4) ಆನಾಸ ಮತ್ತು ಗ್ರಾವ್ಯ ಇಲಾಖೆಯ ಕಾಂಪೆಂಡಿಯಮ್‌ನ ನಿರ್ವಹಣೆ

**VII ಹಿರಿಯ ಸಹಾಯಕರು/ಸಹಾಯಕರು**

ಶಾಖಾಧಿಕಾರಿ/ಪೀಠಾಧಿಕಾರಿಯವರ ಆದೇಶದಂತೆ ಇವರು ಕಾರ್ಯನಿರ್ವಹಿಸುತ್ತಾರೆ. ಶಾಖೆಯಲ್ಲಿ ವ್ಯವಹರಿಸಲು ಹಂಚಿಕೆಯಾಗಿರುವ ವಿಷಯ ಶೀರ್ಷಿಕೆಗಳಿಗೆ ಸಂಬಂಧಿಸಿದ ಪ್ರಕರಣಗಳ ಕುರಿತಂತೆ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳಿಂದ ಸ್ವೀಕೃತವಾದ ಪ್ರಸ್ತಾವನೆಗಳ ಬಗ್ಗೆ ಕೂಡಲೇ ಪರಿಶೀಲಿಸಿ, ಸೂಕ್ತ ಟಿಪ್ಪಣಿ ಬರೆಯುವುದು ಕರಡುಗಳನ್ನು ತಯಾರಿಸುವುದು ಮತ್ತು ಉಕ್ತ ಉಲ್ಲೇಖಗಳನ್ನು ಒದಗಿಸಿ ಶಾಖಾಧಿಕಾರಿಗಳಿಗೆ ಕಡತವನ್ನು ಮಂಡಿಸುತ್ತಾರೆ. ಇವರು ಸಚಿವಾಲಯ ಕೈಪಿಡಿಯಲ್ಲಿ ಸೂಚಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**VIII ಶೀಘ್ರಲಿಪಿಗಾರರು:** ತನ್ನ ಮೇಲಾಧಿಕಾರಿಯು ನೀಡುವ ಉಕ್ತಲೇಖನವನ್ನು ಶೀಘ್ರಲಿಪಿಯಲ್ಲಿ ಬರೆದುಕೊಂಡು ಅದರ ಬೆರಳಚ್ಚು (ಗಣಕಯಂತ್ರದಿಂದ) ತಯಾರಿಸುತ್ತಾರೆ.

**IX ಕಿರಿಯ ಸಹಾಯಕರು**

ತಮಗೆ ವಹಿಸಿದ ವಿಷಯಗಳ ಬಗೆಗೆ ನಿಗದಿಪಡಿಸಿದ ರಿಜಿಸ್ಟರುಗಳನ್ನು ನಿರ್ವಹಿಸುವುದು. ಕಡತಗಳನ್ನು ದಾಖಲಿಸುವುದು ರವಾನಿಸುವುದು, ಹಾಗೂ ಶಾಖೆಯಲ್ಲಿ ಕಡತ/ಸ್ವೀಕೃತಿಗಳನ್ನು ಸಂಬಂಧಪಟ್ಟವರಿಗೆ, ಇವರು ನೀಡುತ್ತಾರೆ.

**X ಬೆರಳಚ್ಚುಗಾರ**

ಶಾಖೆಯಲ್ಲಿನ ಎಲ್ಲಾ ಬೆರಳಚ್ಚು ಕೆಲಸಗಳನ್ನು ನಿರ್ವಹಿಸುವುದು

**XI ಗ್ರೂಪ್ ಡಿ**

ಶಾಖೆಯನ್ನು ಚೊಕ್ಕಟವಾಗಿಡುವುದು, ಸಚಿವಾಲಯದೊಳಗಿನ ಇಲಾಖೆಗೆ/ಶಾಖೆಗೆ ಕಡತಗಳನ್ನು/ಟಪಾಲುಗಳನ್ನು ತೆಗೆದುಕೊಂಡು ಹೋಗುವ ಕಾರ್ಯ ನಿರ್ವಹಿಸುತ್ತಾರೆ.

**iii) ಕಲಂ 4(1)(ಬಿ)( iii)ಗೆ ಸಂಬಂಧಿಸಿದಂತೆ**

**ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

ಇಲಾಖಾ ಮುಖ್ಯಸ್ಥರುಗಳಿಂದ ಈ ಸಂಬಂಧ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ ಹಾಗೂ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರನ್ವಯ ಅಂದರೆ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ ಇವರಿಂದ ಪ್ರಸ್ತಾವವು ಸ್ವೀಕೃತವಾದೊಡನೆ ಸಂಬಂಧಿಸಿದ ಸಹಾಯಕರು/ಹಿರಿಯ ಸಹಾಯಕರು ಹೊಸ ಕಡತವನ್ನು ತೆರೆದು ಅಥವಾ ವಿಷಯದ ಬಗ್ಗೆ ಲಭ್ಯವಿದ್ದ ಹಿಂದಿನ ಕಡತದಲ್ಲಿ ಸಂಬಂಧಪಟ್ಟ ನಿಯಮಗಳ ಅಡಿಯಲ್ಲಿ ಟಿಪ್ಪಣಿಯನ್ನು ಮಂಡಿಸುತ್ತಾರೆ. ಈ ಟಿಪ್ಪಣಿಗಳನ್ನು ಸಂಬಂಧಿಸಿದ ಪೀಠಾಧಿಕಾರಿ/ಶಾಖಾಧಿಕಾರಿಯವರು ಪರಿಶೀಲಿಸಿ ಉಪ ಕಾರ್ಯದರ್ಶಿ/ಅಧೀನ ಕಾರ್ಯದರ್ಶಿಯವರಿಗೆ ಮಂಡಿಸುತ್ತಾರೆ. ಅಧೀನ ಕಾರ್ಯದರ್ಶಿಯವರು ನಿಯಮಗಳಡಿಯಲ್ಲಿ ಪರಿಶೀಲಿಸಿ, ಉಪ ಕಾರ್ಯದರ್ಶಿಯವರಿಗೆ ಮಂಡಿಸುತ್ತಾರೆ. ಉಪ ಕಾರ್ಯದರ್ಶಿಯವರು ಪರಿಶೀಲಿಸಿ, ಮುಂದಿನ ಆದೇಶಕ್ಕಾಗಿ ಪ್ರಧಾನ ಕಾರ್ಯದರ್ಶಿಯವರಿಗೆ ಕಡತವನ್ನು ಮಂಡಿಸುತ್ತಾರೆ. ಪ್ರಧಾನ ಕಾರ್ಯದರ್ಶಿಯವರು ಅಂತಿಮ ನಿರ್ಣಯ ಕೈಗೊಳ್ಳುತ್ತಾರೆ ಅಥವಾ ಅಗತ್ಯವಿದ್ದಲ್ಲಿ ಕಡತವನ್ನು ಮಾನ್ಯ ಸಚಿವರಿಗೆ ಸಲ್ಲಿಸುತ್ತಾರೆ.

ಇಲಾಖೆಯ ಅಧಿಕಾರಗಳು ವಿವಿಧ ಹಂತದ ಅಧಿಕಾರಿಗಳಿಗೆ ಹಂಚಿಕೆಯಾಗಿದ್ದು, ಈ ಹಂಚಿಕೆಯಂತೆ ಅವರವರ ಅಧಿಕಾರ ವ್ಯಾಪ್ತಿಯಲ್ಲಿ ಕ್ರಮ ತೆಗೆದುಕೊಳ್ಳಲಾಗುತ್ತಿದೆ.

ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ತೆಗೆದುಕೊಳ್ಳಬೇಕಾದ ನಿರ್ಣಯಗಳ ಬಗೆಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿರುವ ಆದೇಶವನ್ನು ದಿನಾಂಕ: 3–6–2002ರಂದು ಸಂಖ್ಯೆ: ಆನಾಸ 142 ಇಭತ 2001ರಂತೆ ಆದೇಶ ಹೊರಡಿಸಲಾಗಿದೆ. ಇದನ್ನು ಅನುಬಂಧ–**III** ರಲ್ಲಿ ಕೊಡಲಾಗಿದೆ.

ಇತರೆ ಇಲಾಖೆಗಳ ಉದಾ:ಆರ್ಥಿಕ ಇಲಾಖೆ, ಕಾನೂನು ಇಲಾಖೆ, ಸಿ.ಆ.ಸು.ಇಲಾಖೆ, ಯೋಜನಾ ಇಲಾಖೆ ಸಹಮತಿ ಅಗತ್ಯವಿದ್ದಲ್ಲಿ, ಅವುಗಳನ್ನು ಆ ಇಲಾಖೆಗಳಿಂದ ಪಡೆದು ಕೊಳ್ಳಲಾಗುವುದು.

ಈ ಸಂಬಂಧ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ ಹಾಗೂ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರನ್ವಯ ಪರಿಶೀಲಿಸಿ ಕ್ರಮ ಜರುಗಿಸಲಾಗುವುದು.

**(iv) ಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು:**

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ(ಸಚಿವಾಲಯದ) ವಿವಿಧ ಹಂತದ ಅಧಿಕಾರಿಗಳು, ಅವರ ಜವಾಬ್ದಾರಿಗಳು ಈ ಕೆಳಗಿನಂತಿದೆ.

**I ಸರ್ಕಾರದ ಕಾರ್ಯದರ್ಶಿಗಳು**

ಇವರು ಇಲಾಖೆಯ ಅಧಿಕೃತ ಮುಖ್ಯಸ್ಥರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕಾನೂನು ಮಾಪನಶಾಸ್ತ್ರ ಇಲಾಖೆ, ಕರ್ನಾಟಕ ಅಹಾರ ಮತ್ತು ನಾಗರಿಕ ಸರಬರಾಜು ನಿಗಮ ಮತ್ತು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದಂತೆ ವ್ಯವಹಾರ ನಿಯಮಗಳಿಗೆ ಒಳಪಟ್ಟು ಮತ್ತು ಇಲಾಖೆಯ ಸಚಿವರ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳನ್ವಯ ಎಲ್ಲಾ ವ್ಯವಹಾರಗಳ ಮೇಲ್ವಿಚಾರಣೆಯನ್ನು ನಿರ್ವಹಿಸುತ್ತಾರೆ. ಅಲ್ಲದೆ, ತನ್ನ ಅಧೀನದಲ್ಲಿನ ಅಧಿಕಾರಿ/ಸಿಬ್ಬಂದಿಯು ಅವರಿಗೆ ವಹಿಸಿದ ಕೆಲಸವನ್ನು ಸಮರ್ಥವಾಗಿ ಮತ್ತು ತ್ವರಿತವಾಗಿ ನಿರ್ವಹಿಸುವುದರ ಮೇಲ್ವಿಚಾರಣೆ ಸಹ ನೋಡುತ್ತಾರೆ.

**II ಸರ್ಕಾರದ ಉಪ ಕಾರ್ಯದರ್ಶಿ**

ಇವರು ಇಲಾಖೆಗೆ ಸಂಬಂಧಿಸಿದ ಎಲ್ಲಾ ಪ್ರಕರಣಗಳ ವಿಲೇವಾರಿ ಹಾಗೂ ಪ್ರಮುಖ ವಿಷಯಗಳ ಮೇಲಿನ ಕ್ರಮದಬಗ್ಗೆ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರಸ್ತಾವನೆಗಳನ್ನು ಮಂಡಿಸುವುದು ಹಾಗೂ ಇಲಾಖೆಯಲ್ಲಿ ಸಂಘಟನೆ ಮತ್ತು ವಿಧಾನಗಳ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಾರೆ.

**III ಅಧೀನ ಕಾರ್ಯದರ್ಶಿ (ಆಹಾರ–1 ಮತ್ತು 2)**

ಇವರು ಆಹಾರ–1 ಮತ್ತು ಆಹಾರ–2 ಶಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ ವಿಷಯಗಳನ್ನು ನಿರ್ವಹಿಸುತ್ತಾರೆ:

1) ಆಹಾರ ಮತ್ತು ಪೆಟ್ರೋಲಿಯಂ ಉತ್ಪನ್ನಗಳ (LPG, Kerosene, Petrol Diesel) ಬಗೆಗಿನ ವಿಷಯಗಳು.

2) ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮಕ್ಕೆ ಸಂಬಂಧಿಸಿದಂತೆ Arbitration cases, Nomination of Directors and Writ Petitions and Service matters.

3) ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಆಹಾರ ಧಾನ್ಯಗಳ ವಿತರಣೆ ವಿಷಯಗಳು

4) ಸಕ್ಕರೆ/ಸೀಮೆಎಣ್ಣೆ ಹಂಚಿಕೆ ಹಾಗೂ ಲಾಭಾಂಶದ ಬಗೆಗಿನ ವಿಷಯಗಳು

5) ಸಾವಿಪ ಅಡಿಯಲ್ಲಿ ಬರುವ ದೂರುಗಳು.

6) ನ್ಯಾಯಬೆಲೆ ಅಂಗಡಿಗಳನ್ನು ಲಾಭದತ್ತ ನಡೆಸಲು ತೆಗೆದುಕೊಳ್ಳಬಹುದಾದ ವಿಷಯಗಳ ಕುರಿತು

7) ನಾರಿನಿಕೇತನಗಳು/ಇತರೇ ಕಲ್ಯಾಣ ಸಂಸ್ಥೆಗಳಿಗೆ ಕೇಂದ್ರ ಸರ್ಕಾರವು ಹಂಚಿಕೆ ಮಾಡಿದ ಆಹಾರಧಾನ್ಯಗಳ ವಿತರಣೆ/ಉಪಯೋಗಿತಾ ಪತ್ರಗಳನ್ನು ಕ್ರೋಢೀಕೃತಗೊಳಿಸುವುದು.

8) ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಂಬಂಧದ ಪ್ರಸ್ತಾವನೆಗಳು ಹಾಗೂ ಹೆಚ್ಚುವರಿ ಅನುದಾನದ ಪ್ರಸ್ತಾವಗಳು

9) Condom ಗಳನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಾಟ ಮಾಡುವ ಹಾಗೂ ತತ್ಸಂಬಂಧ ಪ್ರಸ್ತಾವನೆಗಳು

10) ಸಾವಿಪ ಅಡಿಯಲ್ಲಿ ಆಹಾರಧಾನ್ಯಗಳ ವಿತರಣೆಯಲ್ಲಿ ಬೇಕಾಗಬಹುದಾದ ಹೆಚ್ಚುವರಿ ಅನುದಾನದ ಪ್ರಸ್ತಾವಗಳು.

11) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಸಚಿವರ ನ್ಯಾಯಾಲಯದಲ್ಲಿ ಸಲ್ಲಿಸುವ ಮೇಲ್ಮನವಿಗಳ ಅರ್ಜಿಗಳು

12) ಸಾವಿಪ ಅಡಿಯಲ್ಲಿ ಆಹಾರಧಾನ್ಯಗಳ ಕೊರತೆಯ ಹಣವನ್ನು ಮನ್ನಾ ಮಾಡುವ ವಿಷಯಗಳು

13) ಅಕ್ಷರ ದಾಸೋಹ/SGRY/(SC) ಆಹಾರಧಾನ್ಯಗಳ ವಿತರಣೆ/ಸಾಗಾಣಿಕೆ ವೆಚ್ಚ ಹಾಗೂ ಸೇವಾ ವೆಚ್ಚ ಹಾಗೂ ಸಂಬಂಧಿಸಿದ ಇತರೇ ಪ್ರಸ್ತಾವನೆಗಳು

14) ರೇಕ್ ಮೂವ್‌ಮೆಂಟ್ ಪ್ಲಾನ್.

15) ಗೋದಾಮು ಬಗೆಗಿನ ಪ್ರಸ್ತಾವನೆಗಳು

16) RBIಗೆ ಕಳುಹಿಸಬೇಕಾದ ಆಹಾರಧಾನ್ಯಗಳ ಸಂಗ್ರಹಣೆ ವಿಷಯಗಳು (Stock Statement)

17) ಸಾವಿಪ ಅಡಿಯಲ್ಲಿ Cash Credit facility ಪ್ರಸ್ತಾವನೆಗಳು

18) ಅಗತ್ಯ ವಸ್ತುಗಳ ಕಾಯ್ದೆಯಡಿಯಲ್ಲಿಯ ಎಲ್ಲಾ ವಿಷಯಗಳು

19) ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಆಹಾರಧಾನ್ಯಗಳ ಸಂಗ್ರಹಣೆ ಮತ್ತು ವಿಲೇವಾರಿ/ಹಣ ಬಿಡುಗಡೆ ವಿಷಯಗಳು (ಆವರ್ತಕ ನಿಧಿಯಿಂದ)

20) ಲೆವಿ ಸಕ್ಕರೆಯ ಸಗಟು ಮತ್ತು ಚಿಲ್ಲರೆ ಲಾಭಾಂಶಗಳ ವ್ಯತ್ಯಾಸದ ದರ ಪರಿಷ್ಕರಿಸುವ ಬಗೆಗಿನ ಪ್ರಸ್ತಾವನೆಗಳು

21) ಸಾವಿಪ ಅಡಿ ಆಹಾರಧಾನ್ಯಗಳ ಸಾಗಾಣಿಕೆ ಸಂಬಂಧದಲ್ಲಿನ ಟೆಂಡರ್ ಪ್ರಕ್ರಿಯೆಯ ಪ್ರಸ್ತಾವನೆಗಳು ಸಾರ್ವಜನಿಕ/KFCSC/TAPCMS ಹಾಗೂ ಈ ವಿಷಯಕ್ಕೆ ಸಂಬಂಧಿಸಿದ ರಿಟ್ ಅರ್ಜಿಗಳು

22) ನ್ಯಾಯಬೆಲೆ ಅಂಗಡಿಗಳಿಗೆ ಸರಬರಾಜು ಮಾಡುತ್ತಿರುವ ಅಯೋಡಿನ್‌ಯುಕ್ತ ಉಪ್ಪು ಬಳಕೆ ಬಗೆಗಿನ ಪ್ರಸ್ತಾವನೆಗಳು

23) ಕೇಂದ್ರ ಸರ್ಕಾರದ ಅನುದಾನದಡಿ ಸಂಚಾರಿ ವಾಹನಗಳನ್ನು ಖರೀದಿಸುವ ಪ್ರಸ್ತಾವನೆಗಳು

24) ಖಾದ್ಯ ತೈಲದ ಬಗೆಗಿನ ಪ್ರಸ್ತಾವನೆ

25) ವಿಧಾನಸಭೆ ಮತ್ತು ವಿಧಾನ ಪರಿಷತ್ತು ಅಧಿವೇಶನ ಸಮಯದಲ್ಲಿ ಮೇಲ್ಕಂಡ ವಿಷಯಗಳ ಮೇಲೆ ಬರುವ ಪ್ರಶ್ನೆಗಳ ನಿರ್ವಹಣೆ. ಹಾಗೂ ಲೋಕಸಭಾ ಮತ್ತು ರಾಜ್ಯಸಭಾ ಪ್ರಶ್ನೆಗಳಿಗೆ ಉತ್ತರಿಸುವುದು.

26) ತುರ್ತು ಸಂದರ್ಭದಲ್ಲಿ ಮೇಲಾಧಿಕಾರಿಗಳು ಸೂಚಿಸುವ ಯಾವುದೇ ವಿಷಯಗಳ ನಿರ್ವಹಣೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್) ನಿಯಂತ್ರಣ ಆಧ್ಯಾದೇಶ 2011 ರ ನಿಯಮ 6(5) ರಂತೆ ಈ ಕೆಳಗೆ ನಮೂದಿಸಿರುವ ಪ್ರದೇಶಗಳನ್ನು ಕಲ್ಲುಪುಡಿ ಮಾಡುವ ಘಟಕಗಳನ್ನು (ಕ್ರಷರ್‌ಗಳನ್ನು) ಸ್ಥಾಪಿಸಲು ಉಲ್ಲೇಖ 1 ಮತ್ತು 2 ರಂತೆ ಸುರಕ್ಷಿತ ವಲಯವೆಂದು ಗುರುತಿಸಿದ್ದು, ಇದನ್ನು ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಕಲ್ಲುಪುಡಿ ಮಾಡುವ ಘಟಕಗಳನ್ನು ನಡೆಸುವವರು ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್) ನಿಯಂತ್ರಣ ಆಧ್ಯಾದೇಶ 2011 ರ ನಿಯಮ 3(1) ರ ಅನುಸಾರ ಲೈಸೆನ್ಸ್‌ನ್ನು ಪಡೆಯಬೇಕಾಗಿದೆ. ನಿಯಮ 3(2) ರಂತೆ, ಈ ಆಧ್ಯಾದೇಶ ಪ್ರಾರಂಭವಾದ ದಿನಾಂಕದಂದು ಯಾವುದೇ ಪ್ರಾಧಿಕಾರದಿಂದ ನೀಡಲಾದ ಲೈಸೆನ್ಸ್‌ನೊಂದಿಗೆ ಕಲ್ಲುಪುಡಿ ಮಾಡುವ ಘಟಕದ ವ್ಯವಹಾರವನ್ನು ನಡೆಸುತ್ತಿರುವ ಯಾವೊಬ್ಬ ವ್ಯಕ್ತಿಯು ಮೂರು ತಿಂಗಳೊಳಗಾಗಿ ಅರ್ಜಿ ಸಲ್ಲಿಸತಕ್ಕದ್ದು, ಲೈಸೆನ್ಸ್ ದೊರೆತ ಮೇಲೆ ತಮ್ಮ ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕವನ್ನು ಆರು ತಿಂಗಳೊಳಗಾಗಿ ಸುರಕ್ಷಿತ ವಲಯಕ್ಕೆ ಸ್ಥಳಾಂತರಿಸತಕ್ಕದ್ದು. ಕಲ್ಲುಪುಡಿ ಮಾಡುವ ವ್ಯವಹಾರಗಳನ್ನು ಕೈಗೊಳ್ಳಲು ಲೈಸೆನ್ಸ್ ಮಂಜೂರಾತಿಗಾಗಿ ಅಗತ್ಯ ದಸ್ತಾವೇಜುಗಳು ಮತ್ತು ನಿಗದಿತ ಶುಲ್ಕಗಳೊಡನೆ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳಾದ ಹಿರಿಯ ಭೂವಿಜ್ಞಾನಿ, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ ಸಲ್ಲಿಸತಕ್ಕದ್ದು.

ಲೈಸೆನ್ಸ್ ಮಂಜೂರಾತಿ ಅಥವಾ ನಿರಾಕರಣೆಯನ್ನು ಸ್ಥಳ ಪರಿಶೀಲನೆ, ಲೈಸೆನ್ಸ್‌ನ ಇತರೇ ಷರತ್ತುಗಳ ನೆರವೇರಿಕೆಯ ಬಗ್ಗೆ ಯುಕ್ತ ಸತ್ಯಾಪನೆ ತರುವಾಯ ಮಾಡಲಾಗುವುದು. ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳಿಗಾಗಿ (ಕ್ರಷರ್) ಗುರುತಿಸಿರುವ ಸುರಕ್ಷಿತ ವಲಯಗಳ ವಿವರಗಳು ಈ ಕೆಳಕಂಡಂತಿವೆ.

**ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿನ ಸ್ಟೋನ್ ಕ್ರಷರ್‌ಗಳ ಸುರಕ್ಷಿತ ವಲಯ**

| Sl. No | Taluk | Village | Certified Sy.Nos. | Certified area in acres | Proposed adjacent Sy.Nos. | Proposed addl. Land in acres |
|---|---|---|---|---|---|---|
| 1 | Already Certified | | 39 (Govt. land) | 90.35 | 13/2 | 1.36 |
| | Chikkaba lla-pura | Kanivenaray-anapura | | | | |
| | | | 113 | 0.10 | 13/1 & | 0.35 |
| | | | 93 | 4.00 | 15/1 | 1.09 |
| | | | 88 | 0.27 | | |
| | | | 147 | 1.26 | | |
| | | | 15 | 1.24 | | |
| | | | 9 | 5.33 | | |
| | | | Total | 104.35 | Total | 4.00 |
| | | | **Grand Total** | | **108.35** | |

ಈ ಮೇಲ್ಕಂಡ ಕಲ್ಲುಪುಡಿ ಮಾಡುವ ಕ್ರಷರ್ ಸುರಕ್ಷಿತ ವಲಯಕ್ಕೆ ಅರಣ್ಯ, ವ್ಯವಸಾಯ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆಗಳು ಒಪ್ಪಿಗೆಯನ್ನು ಸೂಚಿಸಿರುತ್ತಾರೆ.

ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರು ವಿಧಿಸಿರುವ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. There shall not be construction of any building or other structures within 1 Km radius of the boundary of Safer Zone.
2. Action shall be initiated to construct an appropriate boundary around the safer zone and there shall be planting of tall growing foliage bearing perennial trees all along the boundaries. At least five such rows growing leafy trees shall form a curtain to the surrounding area so that there is no escape of dust particles to its surrounding limits.
3. Each Stone Crusher shall be allocated with a minimum area of 1 Acre of land in the Safer Zone as per the requirement of the Karnataka Regulation of stone crushers Act, 2011.
4. Link roads and Internal roads within the safer zone shall be properly tarred and maintained so that fugitive emissions are reduced. The ambient air quality in the Safer Zone shall conform to the National Ambient Air Quality Standards as specified in Environment (protection) Seventh Amendment Rules, 2009.
5. The entire area shall have a planned rain water harvesting system so that the location is reliant as far as water requirement is concerned.
6. This Notification is subject to any judgment/s of the Hon'ble Supreme Court of High Court or any other Courts that may be pronounced from time to time in the said matter of Safer Zone.
7. The Applicant shall shift the Crusher to the Safer Zone within the time prescribed under The Karnataka Regulation of Stone Crushers Act, 2011.
8. There shall not be any complaint w.e.t. Water & Air pollution against the crusher proposed to be established in the Safer Zone .

This notification is subject to the conditions of the Karnataka Regulation of Stone Crusher Act, 2011 and Rules, 2012.

**PR.2038** ಜಿಲ್ಲಾಧಿಕಾರಿಗಳು,

**S.C.10** ಚಿಕ್ಕಬಳ್ಳಾಪುರ ಜಿಲ್ಲೆ.